# ಮಾನಸಿ

ತಿಂಗಳ ಪತ್ರಿಕೆ. ಮಾರ್ಚ್ ೧೯೯೦

ಆರ್. ಕಲ್ಯಾಣಮ್ಮನವರ ಎರಡು
ಬರಹಗಳು.

ಬಾಲಕಿಯರ ಮೇಲಿನ ಲೈಂಗಿಕ ಹಿಂಸೆ.

ಗುಟ್ಟು

ಅವ್ವನ ಸೀರೆ

ಕಕ್ಕಲ ಹೂವಿನ ಹಾಡು.



# ಮಾನಸ

ಸಂಪುಟ : ೩ ಸಂಚಿಕೆ ೩

ಮಾರ್ಚ್ ೧೯೯೦

**ಸಂಪಾದಕೀಯ ಮಂಡಳಿ**

ರಾಜೇಶ್ವರಿ ಎಚ್. ಎಸ್., ಸರಸ್ವತಿ ದು.,
ಚಂಪಾವತಿ ಎಚ್. ಎಸ್.,
ಸವಿತ ಎ., ಗೀತಾ ಜಿ. ಎಸ್.

**ಸಲಹೆ—ಸಹಕಾರ**

ಇಳಾವಿಜಯ

ವಿಳಾಸ "ಮಾನಸ ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ.)
ಬೆಂಗಳೂರು—560-067.

ಬಿಡಿಪ್ರತಿ: 2 ರೂ.

ಸೂಚನೆ: ವಾರ್ಷಿಕ ಚಂದಾ :20ರೂ.
ಆಜೀವ ಚಂದಾ :250ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


ಈ ಸಂಚಿಕೆಯಲ್ಲಿ..........



# ಸಂಪಾದಕೀಯ

ಗೃಹ ಮಂಡಳಿಯು ನಿರ್ಮಿಸುವ ಕಡಿಮೆ ಆದಾಯದ ಮನೆಗಳನ್ನು ಮಹಿಳೆಯರಿಗೆ ಮಾತ್ರ ನೀಡಬೇಕು ಇದರಿಂದ ನಿಗದಿತ ವೇಳೆಗೆ ಮಂಡಳಿಗೆ ಕಂತುಗಳ ರೂಪದಲ್ಲಿ ಹಣ ಬರುತ್ತದೆ. ಹಾಗೂ ಕುಟುಂಬಕ್ಕೆ ಮನೆಯೂ ಉಳಿಯುತ್ತದೆಯೆಂದು ಹೇಳುವುದರ ಮೂಲಕ ವಿಧಾನ ಸಭೆಯ ಉಪಾಧ್ಯಕ್ಷೆ ನಾಗಮ್ಮ ಕೇಶವ ಮೂರ್ತಿ ಮಹಿಳೆಯರಿಗೆ ಸಂಬಂಧಪಟ್ಟ ಪ್ರಮುಖವಾದ ಸಮಸ್ಯೆಯನ್ನು ಎತ್ತಿದ್ದಾರೆ.

ಮಹಿಳೆಯರು ಎದುರಿಸುತ್ತಿರುವ ವಸತಿ ಸಮಸ್ಯೆಯನ್ನು ಇತರ ಸಮಸ್ಯೆಗಳಂತೆ ಗಂಭೀರವಾಗಿ ಪರಿಗಣಿಸುತ್ತಿಲ್ಲ. ತನ್ನ ಮಾನಸಿಕ ಹಾಗೂ ದೈಹಿಕ ಶ್ರಮವ್ಯಯಿಸಿ ,ತನ್ನ ವ್ಯಕ್ತಿತ್ವವನ್ನೆ ಅಡವಿಟ್ಟು ಮನೆಯೆಂಬ ಕಲ್ಪನೆಯನ್ನು ನಿಜಗೊಳಿಸುವ ಸ್ತ್ರೀಗೆ ನಾಲ್ಕು ಗೋಡೆಯ "ವಸತಿಯು" ಸಮಸ್ಯೆಯಾಗಿರುವುದು ಐತಿಹಾಸಿಕ ದುರಂತವೇ ಸರಿ.

ಹಳ್ಳಿಗಾಡುಗಳಿಗಿಂತ ಪಟ್ಟಣಗಳಲ್ಲಿ ದುಡಿಯುವ ಮಹಿಳೆಯರು ಎದುರಿಸುವ ಪ್ರಥಮ ಸಮಸ್ಯೆ ವಸತಿಯದು. ಅವಿವಾಹಿತ ಮಹಿಳೆಯರು ಅನಿವಾರ್ಯವಾಗಿ ಹಾಸ್ಟೆಲ್‌ಗಳನ್ನು ಅವಲಂಬಿಸ ಬೇಕಾಗಿದೆ. ಹಣಗಳಿಸುವ ಉದ್ದೇಶವನ್ನು ಮಾತ್ರ ಹೊಂದಿರುವ ಆಡಳಿತ ವರ್ಗಗಳು ಮಹಿಳೆಯರಿಗೆ ಕನಿಷ್ಠ ಸೌಲಭ್ಯಗಳನ್ನು ಒದಗಿಸುವಲ್ಲಿ ವಿಫಲವಾಗಿವೆ. ಕುರಿದೊಡ್ಡಿಯಂತ ಕೊಠಡಿಗಳು, ನೀರಿನ ಅವ್ಯವಸ್ಥೆ, ದುಬಾರಿಯಾದ ಮುಂಗಡಹಣ, ಅವ್ಯವಹಾರ, ನಿರ್ಲಕ್ಷ್ಯ ಮುಂತಾದವುಗಳ ನಡುವೆ ಮಹಿಳೆಯರು ಉಸಿರುಗಟ್ಟಿ ಬದುಕುತ್ತಿದ್ದಾರೆ.

ವಿಚ್ಛೇದಿತ, ಪರಿತ್ಯಕ್ತ, ಹಾಸ್ಟೆಲ್‌ನಲ್ಲಿ ಇರಲಿಚ್ಛಿಸದ ಮಹಿಳೆಯರ ವಸತಿಯನ್ನು ದೊರಕಿಸಿಕೊಳ್ಳುವಲ್ಲಿ ಉಂಟಾಗುವ ಸಮಸ್ಯೆಗಳು ಸಂಕೀರ್ಣವಾದವು. ಮನೆಯ ಮಾಲಿಕರು ಇಂತಹ ಮಹಿಳೆಯರ ಪೂರ್ವಾಪರವನ್ನೆಲ್ಲ ಜಾಲಾಡುವುದರಿಂದ ಒಂಟಿಯಾಗಿ ಧೈರ್ಯದಿಂದ ಬದುಕುವಂತ ಸಾಂಸ್ಕೃತಿಕ ವಾತಾವರಣ, ಬೆಂಬಲ ಸ್ತ್ರೀಯರಿಗೆ ದೊರಕುತ್ತಿಲ್ಲ.

ಗೃಹಮಂಡಳಿಯವರು ನಿರ್ಮಿಸುವ ಕಡಿಮೆ ಆದಾಯದ ಮನೆಗಳನ್ನು ಸ್ತ್ರೀಯರ ಹೆಸರಿಗೆ ನೀಡಬೇಕೆಂದು ಹೇಳಿರುವುದು ಸ್ವಾಗತಾರ್ಹ. ಆದರೆ ಸ್ತ್ರೀಯರಿಗೆ ನೀಡುವಾಗ ಮಹಿಳೆಯರು ನಿಷ್ಠೆಯಿಂದ ಹಣವನ್ನು ಹಿಂದಿರುಗಿಸುತ್ತಾರೆಂದು ಮಾತ್ರಾ ನೋಡದೆ, ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ, ಹಾಗೂ ಅವರು ಎದುರಿಸುತ್ತಿರುವ ಸಮಸ್ಯೆಗಳ ಹಿನ್ನೆಲೆಯಲ್ಲಿ ನೋಡಬೇಕಾಗಿದೆ. ವಿಚ್ಛೇದಿತ, ಅವಿವಾಹಿತ, ಪರಿತ್ಯಕ್ತ ಮಹಿಳೆಯರಿಗೆ ಇಂತಿಷ್ಟು ಮನೆಗಳೆಂದು ನಿಗದಿ ಪಡಿಸಿ ಅವರಿಗೆ ನೀಡುವುದರಿಂದ ತಲೆಯ ಮೇಲೊಂದು ಸೂರಿದೆಯೆಂಬ ನೆಮ್ಮದಿಯಿಂದ ಅವರು ಬದುಕಬಹುದಾಗಿದೆ.

# ಆರ್. ಕಲ್ಯಾಣಮ್ಮನವರ ಎರಡು ಬರಹಗಳು.

ಶ್ರೀಮದಖಂಡ ಮಹೀ ಮಂಡಲದಲ್ಲಿ ಸಮಸ್ತ ಸೌಭಾಗ್ಯಗಳಿಂದೊಡಗೂಡಿದ ದೇಶಗಳು ಈ ಕಾಲದಲ್ಲಿ ಅನೇಕವಾಗಿರುವುದಾದರೂ ಯಾವ ದೇಶವು ವಿದ್ಯಾವಿನಯ, ವಿವೇಕ, ವಿಮಲ, ವಿಜ್ಞಾನವಿರತರಾದಿ ಸಮಸ್ತ ಸಂಪನ್ನರೂ, ವೀರಾಗ್ರೇಸರ ಚಕ್ರವರ್ತಿಗಳೂ, ಋಷಿ ಮುನಿಗಳು, ವೀರಮಾತೆಯರೂ, ಪರಮ ಸಾಧ್ವೀಮಣಿಯರೂ ಆದ ಸ್ತ್ರೀ ಪುರುಷರಿಂದೊಡಗೂಡಿ ನಿತ್ಯಕಲ್ಯಾಣಪ್ರದವಾಗಿ ಸಂತತ ಸುಖ ಸಂತೋಷಗಳಿಂದ ವಿರಾಜಿಸುತ್ತ ಭೂಲೋಕ ಸ್ವರ್ಗದಂತೆ ಶೋಭಿಸುತ್ತಿದ್ದಿತೋ ಅಂತಹ ಈ ನಮ್ಮ ಭರತಖಂಡವು ನಾಗರೀಕ ಸೋಪಾನದ ಉನ್ನತ ಪದವಿಯನ್ನಲಂಕರಿಸಿದ್ದ ಅವಿಭಾಗದ ಮಹೋನ್ನತ ವೈಭವವನ್ನು ಕುರಿತು ಯೋಚಿಸಿದರ ಆಗಿನ ಆಚಾರ ವ್ಯವಹಾರಗಳಿಗೂ, ಈಗಿನ ಆಚಾರ ವ್ಯವಹಾರಗಳಿಗೂ ಅಜಗಜಾಂತರವಾದ ವ್ಯತ್ಯಾಸವು ಕಾಣಬರುತ್ತದೆ. ಪರಮ ತಪೋಧನರಾದ ಋಷಿ ಮುನಿಗಳ ಜ್ಞಾನ ಬಲದಿಂದ ಪ್ರಚಾರಕ್ಕೆ ತರಲ್ಪಟ್ಟು "ಆರ್ಯರ ನಿಕ್ಷಿಪ್ತ ಧನ" ವೆಂಬ ಶ್ರದ್ಧಾ ಭಕ್ತಿಗಳಿಂದ ಯಾವುದನ್ನು ಸಮಸ್ತ ಜನರೂ ಪೂಜಿಸುತ್ತಾರೆಯೋ ಅಂತಹ ವೇದ (ಶ್ರುತಿಯಲ್ಲಿ) "ಮಾತೃ ದೇವೋ ಭವ" ಅಂದರೆ ಪ್ರಾಣಿಗಳಿಗೆ ತಾಯಿಗಿಂತಲೂ ಉತ್ತಮವಾದ ದೇವತೆಯು ಬೇರೊಂದಿಲ್ಲವೆಂದು ಮುಕ್ತ ಕಂಠವಾಗಿ ಹೇಳಲ್ಪಟ್ಟಿದೆ.

ಇಂತು ಆರ್ಯರ ಕಾಲದಲ್ಲಿ ಸ್ತ್ರೀಯರಿಗೆ ಮಹೋನ್ನತವಾದ ಉತ್ತಮಾಧಿಕಾರ ಉಂಟಾಗಿದ್ದಿತು. ಅನೇಕ ಶತಾಬ್ದಿಗಳಿಗೆ ಪೂರ್ವದಲ್ಲಿಯೇ ಲೋಕೋತ್ತರ ಪ್ರತಿಭಾವತಿಯರಾದ ಸ್ತ್ರೀಯರನೇಕರು ಈ ನಮ್ಮ ಭರತ ಖಂಡದಲ್ಲಿ ಹುಟ್ಟಿ ಬೆಳೆದು ತಮ್ಮ ಸತ್ಪ್ರವರ್ತನ ಬಲದಿಂದ ಶಾಶ್ವತವಾದ ಕೀರ್ತಿಯನ್ನು ಗಳಿಸಿರುತ್ತಾರೆ. ವೇದಯುಗದ ಸ್ತ್ರೀಯರಾದ ಗಾರ್ಗೀ, ಮೈತ್ರೇಯಿ, ಅಪಾಲಾ, ಶ್ರದ್ಧಾ, ವಿಶ್ವವಾರಾ ಮುಂತಾದ ಸಾಧ್ವಿಯರ ವಿಚಾರವೂ, ಪೌರಾಣಿಕ ಯುಗದ ಸ್ತ್ರೀಯರಾದ ಸೀತೆ, ಸಾವಿತ್ರಿ, ದಮಯಂತಿ, ಅನಸೂಯ, ನಾಳಾಯನೀ, ಮುಂತಾದ ವನಿತೆಯರ ವಿಚಾರವೂ ಜಗದ್ವಿದಿತವಾಗಿಯೂ ಅನುಪಮಾನ ಮಹಿಮಾ ಸಮೇತವಾಗಿಯೂ ಇರುವುದಲ್ಲದೆ, ಚಾರಿತ್ರ ಯುಗದ ಸ್ತ್ರೀಯರಾದ ಲೀಲಾವತಿ, ಮೀರಾಬಾಯಿ, ರತ್ನಾವಳಿ, ಹೇಮಲತೆ, ಇಂದುಲೇಖೆ, ಸುಭದ್ರೆ, ಸುಶೀಲೆ, ಖಾನಾ, ರುದ್ರಮದೇವಿ, ಸರಸವಾಣಿ, ಲಕ್ಷ್ಮೀಬಾಯಿ, ಪ್ರಿಯಂವದೆ, ಪದ್ಮಿನೀದೇವಿ, ಸಂಯುಕ್ತಾ, ಕೃಷ್ಣಾಕುಮಾರಿ, ವೀರಮತಿ, ರಾಣೀ ಭವಾನಿ, ರೂಪಮಂಜರಿ, ವಿದ್ಯಾಧರಿ, ಸುಂದರಾದೇವಿ, ಬಾಗವತೀ ದೇವಿ, ಮಮತಾದೇವಿ, ಕಳಾವತಿ, ಅಹಲ್ಯಾಬಾಯಿ, ಮುಂತಾದ ಸಾಧ್ವೀಮಣಿಯರ ಚರಿತ್ರೆಗಳು ಕೂಡಾ ಮಹಾ ಪ್ರಭಾವದಿಂದೊಡಗೂಡಿರುತ್ತವೆ. ಇವರೆಲ್ಲರೂ ಇಷ್ಟು ತೇಜೋವತಿಯರಾಗಿರುವುದಕ್ಕೇನು ಕಾರಣವೆಂದರೆ ಉತ್ತಮ ವಿದ್ಯಾಭ್ಯಾಸವೇ ಮುಖ್ಯ ಕಾರಣವಾಗಿರುತ್ತದೆ. ಈ ಕಾಲದಲ್ಲಿಯೂ ವಿದ್ಯಾವತಿಯರು ಕೆಲವರಿರುವರಾದರೂ, ಸನಾತನ ಧರ್ಮ ಬೋಧಕವಾದ ವಿದ್ಯೆಯು ನಮ್ಮಲ್ಲಿನ್ನು ವೃದ್ಧಿಗೆ ಬರಬೇಕಾಗಿದೆ.

ಶ್ಲೋ॥ ಸಂವತ್ಸರವತೀ ಸಕ್ಕಂ ಸಂತಾನಂ ಸದನುಗ್ರಹಃ।
ಸತ್ಕಾಸುಕೃತಿ ಸಂಭಾರಃ ಸಕಾರಾಃ ಸಪ್ತ ದುರ್ಲಭಾಃ॥

ಸಂಪತ್ತು, ಸರಸ್ವತಿ(ವಿದ್ಯೆ), ಸತ್ಯ, ಸನಾತನ, ಸದನುಗ್ರಹ (ಮಹಾತ್ಮರ ಕೃಪೆ) ಉತ್ತಮ ಪದವಿ, ಸತ್ಕಾರ್ಯ ಮುಂತಾದ ಸಮಸ್ತ ಸದ್ಗುಣ ಸಂಪನ್ನೆಯರಾದ ಮಹಿಳೆಯರ ಸಂಖ್ಯೆಯು ಎಷ್ಟು ವಿಸ್ತಾರವಾಗಿ ವೃದ್ಧಿಯಾಗುವುದೋ ದೇಶದ ಅಭ್ಯುದಯವೂ ಅಷ್ಟು ಚೆನ್ನಾಗಿ ವಿಸ್ತರಿಸುವುದು. ಈ ಸಂಕಲ್ಪವು ಸಫಲವಾಗಬೇಕಾದರೆ "ಸ್ತ್ರೀ ವಿಜಯಾಭ್ಯುದಯ" ಗಳನ್ನು ಸೂಚಿಸತಕ್ಕವುಗಳೂ, ಸ್ತ್ರೀಯರಿಂದಲೇ ಪ್ರಕಟಿಸಲ್ಪಡತಕ್ಕವುಗಳೂ ಆದ ದೇಶಭಾಷಾ ಪತ್ರಿಕೆಗಳು ಅನೇಕಾನೇಕವಾಗಿಯೂ ಅತ್ಯವಶ್ಯವಾಗಿಯೂ ಪ್ರಚಾರಕ್ಕೆ ಬರಬೇಕು.

ಈಗ ಪ್ರಚಾರದಲ್ಲಿರುವ ಪತ್ರಿಕೆಗಳಲ್ಲಿ ಸ್ತ್ರೀ ವಿದ್ಯಾಭಿಮಾನವುಳ್ಳವುಗಳು ಒಂದೆರಡಿದ್ದಾಗ್ಯೂ ಆರ್ಯರ ಕಾಲದ ಸ್ತ್ರೀಯರ ಮೇಲು ಪಂಕ್ತಿಯನನುಸರಿಸಿ ಸ್ತ್ರೀಯರ ನೈಸರ್ಗಿಕ ಧರ್ಮಗಳನ್ನು ಬೋಧಿಸತಕ್ಕ ಸಚಿತ್ರ ಪತ್ರಿಕೆಗಳು ಕೆಲವು ಸ್ತ್ರೀಯರಿಂದಲೇ ಪ್ರಕಟಿಸಲ್ಪಡ ಬೇಕಾದ ಅವಕಾಶವು ಪ್ರಕೃತದಲ್ಲಿ ಮುಖ್ಯ ಕರ್ತವ್ಯವೆಂದು ತೋರಿತು. ಅಂತಹ ಪತ್ರಿಕೆಯೊಂದನ್ನು ನಾನು ವಿದ್ಯಾರ್ಥಿನಿಯಾಗಿದ್ದ ಕಾಲದಿಂದಲೂ ನನ್ನ ಮನಸ್ಸಿನಲ್ಲಿ ಇತ್ತು. ಹೀಗಿರುವಲ್ಲಿ ಈಗ್ಗೆ ನಾಲ್ಕು ವರ್ಷಗಳ ಹಿಂದೆ ಪೂಜ್ಯರಾದ ಕೆಲವು ಮಂದಿ ಸೋದರೀಮಣಿಯರ ಸಹಾಯದಿಂದ "ಶ್ರೀ ಶಾರದಾ ಸ್ತ್ರೀ ಸಮಾಜ" ವೆಂಬ ಹೆಸರಿನಿಂದ ಭಾರತ ಮಹಿಳೆಯರ ಶ್ರೇಯೋಭಿವೃದ್ಧಿಗನುಕೂಲವಾದ ಸಮಾಜವೊಂದನ್ನು ಸ್ಥಾಪಿಸಿದ್ದಾಯಿತು. ಸಮಾಜಕ್ಕೆ ರಾಜಸಭಾಭೂಷಣ ದಿವಾನ್ ಬಹದ್ದೂರ್ ಕೆ. ಪಿ. ಪುಟ್ಟಣ್ಣ ಅವರ ಧರ್ಮಪತ್ನಿಯವರಾದ ಶ್ರೀಮತಿ ಪಾರ್ವತಮ್ಮನವರು ಅಧ್ಯಕ್ಷರಾಗಿದ್ದಾರೆ. ಸಮಾಜವು ಅಭಿವೃದ್ಧಿಯಾದಾಗಲೆಲ್ಲ ಪತ್ರಿಕಾ ಪ್ರಚಾರ ವಿಷಯಕವಾದ ನನ್ನ ಮನಸಂಕಲ್ಪವೂ ಮತ್ತಷ್ಟು ದೃಢವಾಗಿ ನನ್ನನ್ನು ತ್ವರೆ ಪಡಿಸಲಾರಂಭಿಸಿತು. ನನ್ನ ಸಂಕಲ್ಪದ ಭಾಗ್ಯವಶವೋ ಎಂಬಂತೆ ಈ ವರ್ಷದಲ್ಲಿ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಳಾಶಾಲೆಯಲ್ಲಿ ನಡೆದ ನಮ್ಮ ಸಮಾಜ ನಾಲ್ಕನೆಯ ವಾರ್ಷಿಕೋತ್ಸವಕ್ಕೆ ಅಧ್ಯಕ್ಷರಾಗಿ (ಈಗ ಮೈಸೂರು ಸಂಸ್ಥಾನದ ಮಂತ್ರಾಲೋಚನಾ ಸಭೆಯಲ್ಲಿ ಕೌನ್ಸಿಲರ್ ಪದವಿಯಲ್ಲಿರುವ ಶ್ರೀಯುತ ಎ. ಆರ್. ಬ್ಯಾನರ್ಜಿಯವರ ಧರ್ಮಪತ್ನಿಯವರಾದ) ಶ್ರೀಮತಿ ನಳಿನೀ ದೇವಿಯವರು ಅಗ್ರಾಸನವನ್ನಲಂಕರಿಸಿದ್ದರು. ಅವರು ತಮ್ಮ ಸಂಭಾಷಣೆಯಲ್ಲಿ ಪತ್ರಿಕಾ ಪ್ರಚಾರವನ್ನೂ ಪ್ರಸ್ತಾಪಿಸುತ್ತ, "ಬಂಗಾಳದಲ್ಲಿ ಶ್ರೀಮತಿ ಸ್ವರ್ಣಕುಮಾರಿ ದೇವಿಯವರಿಂದ ಪ್ರಕಟಿಸಲ್ಪಡುತ್ತಿರುವ ಭಾರತಿ" ಎಂಬ ಪತ್ರಿಕೆಯ ರಚನಾ ಕ್ರಮವನ್ನನುಸರಿಸಿ ಕನ್ನಡದಲ್ಲೊಂದು ಪತ್ರಿಕೆಯನ್ನು ಯಾರಾದರೂ ನಡೆಯಿಸಿದರೆ ಅದಕ್ಕೆ ತಾವು ಸಹಾಯ ಮಾಡುವುದಾಗಿ ಸೂಚಿಸಿದರು. ವಿದ್ಯಾವತಿಯೂ ಶ್ರೀಮಂತಿನಿಯೂ ಆದ ಆ ದೇವಿಯವರ ಸಂಭಾಷಣೆಯು ನನ್ನ ಸಂಕಲ್ಪವು ಕ್ರಿಯಾರೂಪವಾಗಿ ಅನುಷ್ಠಾನಕ್ಕೆ ಬರತಕ್ಕ ಶುಭ ಸೂಚನೆಯಾಗಿ ಪರಿಣಮಿಸಿತು. ತದನಂತರ ವಿಚಾರದ ಕಾರ್ಯಭಾರನ್ನು ವಹಿಸುವುದಕ್ಕೆ ಬೇಕಾದ ದ್ರವ್ಯ ಸೌಕರ್ಯಗಳನ್ನು ಕುರಿತು ನಮ್ಮ ಸಭಾಧ್ಯಕ್ಷರೊಂದಿಗೂ ಕೆಲವು ಮಂದಿ ಸಭಿಕರು(ಮೆಂಬರುಗಳೊಂದಿಗೂ)ಯೋಚಿಸಲಾಯಿತು ಆಗ್ಗೆ ಸಮಾಜದ ರಿಪೋರ್ಟ್‌ನಲ್ಲಿ ಕಂಡಂತೆ ನಮ್ಮಲ್ಲಿ ಮಿಕ್ಕಿದ ಧನವನ್ನು ಪತ್ರಿಕಾ ಪ್ರಚಾರಕ್ಕಾಗಿ ಉಪಯೋಗಿಸಿಕೊಳ್ಳಬಹುದೆಂಬ ಅಂಗೀಕಾರವು ಲಭಿಸಿತು. ಕೆಲವು ಮಂದಿ ಹಿತೈಷಿಣಿಯರೂ ಪ್ರೋತ್ಸಾಹಗೊಳಿಸಿದರು. ಹೀಗೆ ಸಾಧನ ಬಾಹುಳ್ಯವು ಸಿದ್ಧಿಸಿರುವುದನ್ನು ಯೋಚಿಸಿ ನೋಡುವಾಗೆಲ್ಲ ಎಲ್ಲವು ದೈವಾನುಗ್ರಹವೆಂದು ಅಂತರ್ವಾಣಿಯು ಬೋಧಿಸಿತು. ಈ ಕಾರ್ಯಗಳ ಆಧಾರದಿಂದಲೂ ನನ್ನ ಸಂಕಲ್ಪ ಪ್ರೋತ್ಸಾಹದಿಂದಲೂ, ಸೋದರ, ಸೋದರಿಮಣಿಯರ ಸಹಾಯದಿಂದಲೂ ಧೈರ್ಯವನ್ನವಲಂಭಿಸಿ ಈ ಪತ್ರಿಕಾ ಪ್ರಚಾರ ಕಾರ್ಯವನ್ನಾರಂಭಿಸುವೆನು.

ಬಿ.ಎ ಮುಂತಾದ ಪಟ್ಟ ಪರೀಕ್ಷಾ ಸಿದ್ಧರಾದ ಪ್ರೌಢವಿದ್ಯಾವತಿಯರೂ. ಶ್ರೀಮಂತಿನಿಯರೂ ಆದ ಮಹಿಳೆಯರ್ಯಾರಾದರೂ ವಹಿಸಲೇಬೇಕಾದ ಈ ಘನಕಾರ್ಯವನ್ನು ಅಲ್ಪಜ್ಞಳಾದ ನಾನು ಕೈ ಹಿಡಿದಿರುವುದಕ್ಕೆ ಮೂಲ ಕಾರಣವಾದ ಧೈರ್ಯವೆಂದರೆ "ಜಗನ್ಮಾತ್ರ ಸ್ವರೂಪಿಯಾದ ಭಗವಂತನು ಸಮಸ್ತ ಜನರ ಸತ್ಪ್ರಯತ್ನಗಳನ್ನು ಕಟಾಕ್ಷಿಸ ತಕ್ಕ ಕರುಣಾ ಸಮುದ್ರ" ನೆಂಬ ಗಾಢವಾದ ವಿಶ್ವಾಸವೇ ಮುಖ್ಯವಾದ ಧೈರ್ಯವಲ್ಲದೇ ನನ್ನ ವಿದ್ಯಾ ವೈದುಷ್ಯದ ಬಲವು ಎಷ್ಟು ಮಾತ್ರವೂ ಕಾರಣವಲ್ಲ. ಶ್ರಮದ ಮೂಲ ಕರ್ತರೂ, ಸತ್ಯಸಂಪನ್ನರೂ, ದೇಶಾ ಭಾಷಾ ಭೂಷಣರೂ, ಸಾಹ್ಯರೂ, ಸಾಹಿತ್ಯ ಪೋಷಣರೂ, ಸುಗುಣಮಣಿಗಳು, ಪಟುತರ ಕವಿತ್ವ ಲಕ್ಷಣವೇತ್ತರು, ನೀತಿವಂತರೂ, ಧಾನ ಧರ್ಮಪ್ರಿಯರು, ದಯಾವಂತರೂ, ವಿದ್ವತ್‌ಕಾಂಡರೂ, ವಿದುಷೀಮಣಿಯರೂ, ಆದ ಸೋದರ, ಸೋದರಿಯರೆಲ್ಲರೂ "ಸರಸ್ವತಿ ಪತ್ರಿಕೆ" ಗೆ ಸಹಾಯಕರಾಗಬೇಕೆಂದು ಪ್ರಾರ್ಥಿಸುತ್ತಾ ಯಾರ ದಿವ್ಯ ಪರಿಪಾಲನ ಬಲದಿಂದ ನಮ್ಮ ಈ ಹಿಂದು ದೇಶದಲ್ಲಿ ಸ್ತ್ರೀಯರ ವಿದ್ಯೆಯು ತಲೆದೋರಿತೋ ಅಂತಹ ಬ್ರಿಟಿಷ್ ಪರಿಪಾಲನಕ್ಕೂ ಯಾರ ಉದಾರ ಗುಣದಿಂದ ಈ ನಮ್ಮ ಮೈಸೂರು ದೇಶದಲ್ಲಿ ಸ್ತ್ರೀವಿದ್ಯೆಯು ದಿನ ದಿನ ಪ್ರವರ್ಧಮಾನವಾಗುತ್ತಿರುವುದೋ ಅಂತಹ ಉದಾರಗುಣ ಸಂಪನ್ನರಾದ ಶ್ರೀಮಾನ್ ಮಹಾರಾಜ ಶ್ರೀಕೃಷ್ಣರಾಜೇಂದ್ರ ಒಡೆಯರ್,ಬಹದ್ದೂರ್ ಜಿ. ಸಿ. ಎಸ್. ಐ. ರವರಿಗೂ,

ಶ್ರೀಮನ್ ಯುವರಾಜರಿಗೂ, ಮಾತೃ ಮಹಾರಾಣಿ ಸಿ. ಡಿ. ಅವರು ಮತ್ತು ಶ್ರೀಮಾನ್ ಮಹಾರಾಣಿ ಯವರ್ಗೂ, ಶ್ರೀ ಯುವರಾಜ್ಞಿಯವರಿಗೂ ನನ್ನ ವಿನಯಪೂರ್ವಕವಾದ ನಮಸ್ಕಾರಗಳನ್ನು ಸಮರ್ಪಿಸುತ್ತಿರುವೆನು. ಸ್ತ್ರೀ ವಿದ್ಯಾಭಿಮಾನಿಗಳೂ, ಮಂತ್ರಿವರ್ಯರೂ ಆದ ಶ್ರೀಯುತ ಸರ್. ಎಂ. ವಿಶ್ವೇಶ್ವರಯ್ಯನವರಿಗೂ, ಸಹೃದಯರಾದ ಭಾತೃ, ಭಗಿನೀ ಜನರಿಗೆಲ್ಲರಿಗೂ ನನ್ನ ಮನಃ ಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತಿರುವೆನು.

ಇಂತು ಬಿನ್ನಮಿಸುವ,
ಆರ್ ಕಲ್ಯಾಣಮ್ಮ.

(ಈ ಲೇಖನ "ಸರಸ್ವತಿ ಪತ್ರಿಕೆ" ಯ ಪ್ರಥಮ ಸಂಚಿಕೆಯ ಮುನ್ನುಡಿಯ ಪ್ರತಿರೂಪ.)

## —: ಬಾಲ್ಯವಿವಾಹ :—

ನಮ್ಮ ಈ ಭರತಖಂಡದಲ್ಲಿ ಅನಾದಿಕಾಲದಿಂದಲೂ ಅನೇಕ ಪದ್ಧತಿಗಳು ಬದಲಾಯಿಸದೇ ನಿಂತಿರುವುದು ಸರಿಯಷ್ಟೆ. ಇವುಗಳಲ್ಲಿ ಬ್ರಾಹ್ಮಣರೇ ಮೊದಲಾದವರಲ್ಲಿ ಆಚರಣೆಯಲ್ಲಿರುವ ಅತಿ ಬಾಲ್ಯವಿವಾಹವು ಕೇವಲ ಅನುಚಿತವಾಗಿರುವ ಪದ್ಧತಿಗಳಲ್ಲಿ ಒಂದಾಗಿರುವುದು. ಚಿಕ್ಕ ಮಕ್ಕಳು ಬೊಂಬೆಯ ಮದುವೆಯನ್ನು ಮಾಡಿ ಸಂತೋಷ ಪಡುವಂತೆ ದೊಡ್ಡ ಮಕ್ಕಳಾದ ತಾಯಿ ತಂದೆಗಳು ತಮ್ಮ ಮಕ್ಕಳಾದ ಬೊಂಬೆಗಳ ವಿವಾಹವನ್ನು ಮಾಡಿ ಸಂತೋಷ ಪಡುತ್ತಿರುವವರು. ಚಿಕ್ಕ ಮಕ್ಕಳು ಕೇವಲ ಬೊಂಬೆಗಳಂತೆ ಅಚರ ವಸ್ತುಗಳಾಗಿದ್ದ ಪಕ್ಷದಲ್ಲಿ ತಾಯಿತಂದೆಗಳು ಶಿಶು ವಿವಾಹವನ್ನು ಮಾಡಿ ಸಂತೋಷ ಪಡುವುದರಲ್ಲಿ ಆಕ್ಷೇಪವೇನೂ ಇರಲಾರದು. ಜೀವಕಳೆಗಳಿಂದ ಪರಿಪೂರ್ಣರಾದ ಮಕ್ಕಳಿಗೆ ಬಾಲ್ಯ ವಿವಾಹವನ್ನು ನಡೆಸುವುದು ಅನೇಕ ವೈಪರೀತ್ಯಗಳಿಗೆ ಮಾರ್ಗ ಉಂಟಾಗುತ್ತಿರುವುದು. ಈ ನಮ್ಮ ಹಿಂದೂ ದೇಶದಲ್ಲಿ ಹೊರತು ಮತ್ತಾವ ದೇಶದಲ್ಲಿಯೂ ಬಾಲ್ಯವಿವಾಹವು ಆಚರಣೆಯಲ್ಲಿಲ್ಲ. ಯುರೋಪ್, ಅಮೇರಿಕಾ, ಆಸ್ಟ್ರೇಲಿಯಾ, ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ಪ್ರಾಪ್ತ ವಯಸ್ಕರಾದ ಮೇಲೆ ವಿವಾಹ ಮಾಡುವರೇ ಹೊರ್ತು ಬಾಲ್ಯ ವಿವಾಹವೆನ್ನುವ ಪ್ರಸಕ್ತಿಯೇ ಇಲ್ಲ. ನಮ್ಮ ಹಿಂದೂ ದೇಶದಲ್ಲಿಯೂ ಬ್ರಾಹ್ಮಣರ ಹೊರ್ತು ಇತರ ಜಾತಿಗಳಲ್ಲಿ ಬಾಲ್ಯ ವಿವಾಹವು ಅಷ್ಟಾಗಿ ಆಚರಣೆಯಲ್ಲಿಲ್ಲ. ಮೊದಲಿಯಾರ್, ಮಹಮ್ಮದೀಯರು, ಕ್ರೈಸ್ತರು ಇವರೇ ಮೊದಲಾದವರು ವಧುವಿಗೂ ವರನಿಗೂ ತಕ್ಕ ವಯಸ್ಸಾದ ಮೇಲೆಯೇ ವಿವಾಹವನ್ನೂ ಮಾಡುವರು.

ಬಾಲ್ಯವಿವಾಹದಿಂದಾಗುವ ಕೆಡುಕುಗಳನ್ನೂ ಇಲ್ಲಿ ಸ್ವಲ್ಪ ಮಟ್ಟಿಗೆ ವಿವರಿಸ ಬೇಕಾಗಿರುವುದು. ವರಸಾಮ್ಯವನ್ನು ನೋಡಿ ವಿವಾಹ ಮಾಡುವುದು ಅತ್ಯವಶ್ಯಕವಲ್ಲವೆ? ಬಾಲ್ಯದಲ್ಲಿ ಇದನ್ನು ಯಾವರೀತಿ ನಿರ್ಧರಿಸಬೇಕು? ಬಾಲ್ಯದಲ್ಲಿ ಉದ್ದವಾಗಿ ಬೆಳೆದಿರುವವರು ದೊಡ್ಡವರಾದ ಮೇಲೆ ಗಿಡ್ಡರಾಗಿರಬಹುದು. ಬಾಲ್ಯದಲ್ಲಿ ಸೌಂದರ್ಯವುಳ್ಳವರು ಪ್ರಾಯದಲ್ಲಿ ಕುರೂಪಿಗಳಾಗಬಹುದು. ಪುರುಷರ ಗುಣ, ವಿದ್ಯೆ, ಬುದ್ಧಿ ಮೊದಲಾದವುಗಳನ್ನು ತಿಳಿದುಕೊಂಡು ಕನ್ಯಾದಾನ ಮಾಡುವಂತೆಯೇ ಸ್ತ್ರೀಯರ ಗುಣಗಳನ್ನು ಚೆನ್ನಾಗಿ ಪರಿಶೀಲಿಸಿ ವಿವಾಹ ಮಾಡಬೇಕೆಂಬುದನ್ನು ಸರ್ವರೂ ಒಪ್ಪುವರಲ್ಲವೆ?

ಪ್ರೌಢ ವಯಸ್ಕರಾದ ಸ್ತ್ರೀಯರ ಗುಣಾವಗುಣಗಳನ್ನು ಒಂದೇ ಬಗೆಯಾಗಿ ನಿರ್ಧರಿಸುವಂತೆ ಕೇವಲ ಬಾಲ್ಯಸ್ಥಿತಿಯಲ್ಲಿ ನಿರ್ಧರಿಸುವುದು ಅಸಾಧ್ಯವು. ಆದುದರಿಂದ ವಧೂವರರ ದೇಹಸ್ಥಿತಿಯನ್ನು, ಗುಣಾವಗುಣಗಳನ್ನು ಚೆನ್ನಾಗಿ ಪರಿಶೀಲಿಸದೇ ವಿವಾಹ ಮಾಡುವುದು, ಆಳವರಿಯದೇ ಸಮುದ್ರದಲ್ಲಿ ಬಿದ್ದಂತೆಯೇ, ಕಣ್ಣು ಮುಚ್ಚಿಕೊಂಡು ಅಡವಿಯಲ್ಲಿ ಸಂಚರಿಸಿದಂತೆಯೂ ಆಗುವುದಲ್ಲವೆ? ಈ ಕಾರಣಗಳಿಂದಲೇ ಅನೇಕ ಭಾರ್ಯಾ ಭೃತ್ರ್ಯಗಳು ಇಲಿ ಬೆಕ್ಕುಗಳಂತೆ ಸದಾ ವ್ಯಾಜ್ಯವಾಡುತ್ತಲಿರುವರು. ಇನ್ನು ಸಿಡುಬು-ಎಳವು ಮೊದಲಾದ ರೋಗಗಳಿಗೆ ಬಾಲ್ಯಾವಸ್ಥೆಯಲ್ಲಿಯೇ ತಕ್ಕ ಕಾಲವಾದ್ದರಿಂದ ಆ ಕಾಲವು ಕಳೆಯುವುದಕ್ಕೆ ಮುಂಚೆಯೇ ವಿವಾಹವನ್ನು ಮಾಡುವುದು ವಿಪತ್ತನ್ನು ಬೆಲೆಕೊಟ್ಟು ಕೊಂಡಂತಾಗುವುದು, ಬಾಲ್ಯವಿ

ವಾಹಿತ ದಂಪತಿಗಳಿಗೆ ಪಕ್ವಕಾಲ ಒದಗಲು ಕನಿಷ್ಠಪಕ್ಷ ಹನ್ನೆರಡು ವರುಷಗಳಾದರೂ ಬೇಕು. ಅಷ್ಟೊಂದು ವರುಷಗಳು ಕಳೆದ ನಂತರವೇ ಅವರು ವಿವಾಹದ ಪ್ರಯೋಜನವನ್ನು ಹೊಂದುವರು. ಈ ಹನ್ನೆರಡು ವರ್ಷಗಳ ಮಧ್ಯದಲ್ಲಿ ಎಷ್ಟೊ ವಿಪತ್ತುಗಳು ಇವರನ್ನೆದುರು ನೋಡುತ್ತಾ ಕಾದು ನಿಂತಿರುವುವು. ಈ ವಿಪತ್ತುಗಳಿಗೆಲ್ಲ ತಪ್ಪಿ ಜೀವಂತವಾಗಿರುವರೆಂಬ ನಂಬಿಕೆಯೇನು? ಈ ಕಾರಣದಿಂದಲೇ ಬಾಲ್ಯವಿವಾಹ ಆಚರಣೆಯುಳ್ಳ ನಮ್ಮ ಭಾರತಖಂಡದಲ್ಲಿ ಹಿಂದೂ ವಿಧವೆಯರು ಅಸಂಖ್ಯಾತರಾಗಿರುವರು. ಈ ವಿಧವೆಯರ ಸಂತಾಪವನ್ನ ನೆನೆಸಿಕೊಂಡರೆ ಎಂತಹ ಕಟುಕರ ಮನಸ್ಸೂ ಕರಗಿ ನೀರಾಗುವುದು. ಮೇಲೆ ಹೇಳಿದಂತೆ ಹನ್ನೆರಡು ವರ್ಷಗಳಾದ ನಂತರ ನಡೆಯ ತಕ್ಕ ಕಾರ್ಯಕ್ಕೆ ಈಗಲಿಂದ ಅವಸರ ಪಡಲ್ಯಾಕೆ?

ಕೆಲವು ಮಕ್ಕಳು ಬಾಲ್ಯದಲ್ಲಿ ಆರೋಗ್ಯ ದೃಢಕಾಯರಾಗಿದ್ದರೂ ಬೆಳೆಯುತಾ ಬೆಳೆಯುತಾ ಯೌವನ ಕಾಲದಲ್ಲಿ ಅಸಾಧ್ಯ ರೋಗಗ್ರಸ್ತರಾಗಿ ಸಂಸಾರಕ್ಕೆ ಕೇವಲ ಅನರ್ಹರಾಗುವರು. ಆದುದರಿಂದ ಕೂಡಿದ ಮಟ್ಟಿಗೆ ವಯಸ್ಸಾದ ಮೇಲೆ ವಿವಾಹ ಮಾಡಿದರೆ ಈ ಅನರ್ಥಗಳಿಗೆ ಅವಕಾಶವಿಲ್ಲದಂತಾಗುವುದು. ಈ ದೇಶದಲ್ಲಿ ಕೆಲವು ಸ್ತ್ರೀಯರು ಸಂಸಾರದಲ್ಲಿ ಪ್ರವೇಶಿಸಿ ಇಪ್ಪತ್ತೈದು ವರ್ಷಗಳಿಗೆಲ್ಲಾ ಐದಾರು ಮಕ್ಕಳುಗಳ ತಾಯಿಯರಾಗುವರು. ಪುರುಷರು ಮೂವತ್ತು ವರ್ಷಗಳಿಗೆಲ್ಲಾ ಮೊಮ್ಮಕ್ಕಳನ್ನೂ ಪಡೆದಿರುವುದನ್ನು ಎಲ್ಲೆಲ್ಲಿಯೂ ನೋಡಿರಬಹುದು. ಈ ತಾಯಿಯರ ಶರೀರ ಸ್ಥಿತಿ ಇಷ್ಟರಲ್ಲಿರುವಾಗ ಅವರಿಗೆ ಉಂಟಾಗುವ ಸಂತಾನಗಳು ಎಷ್ಟು ಬಲವುಳ್ಳದ್ದಾಗಿರುವೆಂಬುದನ್ನು ನಾವೇ ಊಹಿಸಬಹುದು. ವೇದನೆಯಲ್ಲಿರುವ ಸ್ತ್ರೀಯರಿಗೆ ಅದರಲ್ಲೂ ಸಾಯುವ ಮುದುಕಿಯರಿಗೆ ತಮ್ಮ ಮನೆಯಲ್ಲಿ ಚಿಕ್ಕಮಕ್ಕಳಿದ್ದರೆ ತಾವು ಸಾಯುವುದಕ್ಕೆ ಮುಂಚೆ ಅವರಿಗೆ ವಿವಾಹ ಮಾಡಿ ನೋಡಬೇಕೆಂಬ ಆಶೆಯಿಂದ ವಯಸ್ಸನ್ನು ಕೂಡಾ ಲೆಕ್ಕಿಸದೆ ವಿವಾಹವನ್ನು ಮಾಡಿಬಿಡುವರು. ಅಯ್ಯೋ! ಅಜ್ಜಿಯವರ ಮರಣಾನಂತರ ಮೊಮ್ಮಕ್ಕಳು ಅನುಭವಿಸುವುದು ಸುಖವೋ ದುಃಖವೋ? ಆ ವಿವಾಹವನ್ನು ನೋಡಿ ಸಂತೋಷಪಟ್ಟ ಅಜ್ಜಿಯು ವಿವಾಹದ ಫಲವನ್ನು ಕಣ್ಣಾರೆ ಕಂಡಿದ್ದರೆ ತಿರುಗಿ ಅಜ್ಜಿಯರಿಗೆ ಅಂಥ ಆಶೆಯೇ ಹುಟ್ಟಲಾರದು. ಮಗಳಿಗೆ ವಯಸ್ಸಾಗುವುದೆನ್ನುವ ಭಯದಿಂದ ವೃದ್ಧರಿಗೊ, ರೋಗಿಗಳಿಗೂ ಕನ್ಯೆಯನ್ನು ಕೊಡುವುದರಿಂದಲೂ ಅನೇಕರು ಕಷ್ಟಗಳನ್ನನುಭವಿಸುತ್ತಲಿರುವರು. ವಿವಾಹದ ವಿಷಯದಲ್ಲಿರುವ ಮುಖ್ಯವಾದ ಕಾರಣ ಒಂದನ್ನು ಗಮನಿಸಬೇಕಾಗಿರುವುದು, ಅದೇನೆಂದರೆ, ವಿವಾಹವೆನ್ನುವುದು ಸ್ತ್ರೀ ಪುರುಷರಿಬ್ಬರೂ ಸೇರಿ ಮಾಡಿಕೊಳ್ಳುವ ಒಡಂಬಡಿಕೆಯೆ ಅಲ್ಲದೆ ಮತ್ತೇನೂ ಅಲ್ಲ. ಆಗ ನಡೆಸತಕ್ಕ ಕ್ರಿಯೆಗಳೂ, ಮಂತ್ರಗಳೂ, ವಿಧಿಗಳೂ, ಸ್ತ್ರೀ ಪುರುಷರು ಮುಂದೆ ಡೆದುಕೊಳ್ಳಬೇಕಾದ ಕ್ರಮಗಳ ವಿಷಯದಲ್ಲಿ ಮಾಡಿಕೊಳ್ಳುವ ಪರಸ್ಪರ ನಿಬಂಧನೆಯಾಗಿರುವದು. ಆ ನಿಬಂಧನೆಗಳ ಉದ್ದೇಶಗಳನ್ನೂ, ಅಭಿಪ್ರಾಯಗಳನ್ನೂ, ವಿವಾಹವೇನೆಂಬುದರ ಅರ್ಥವನ್ನೂ ತಿಳಿದುಕೊಳ್ಳಲಸಮರ್ಥರಾದರೆ ಕೇವಲ ಬಾಲ್ಯವಿವಾಹದಿಂದಾಗುವ ಪ್ರಯೋಜನವೇನು? ಈ ಬಾಲಪ್ರಾಯದಲ್ಲಿ ವಿವಾಹವೆಂದರೇನು? ದಂಪತಿಗಳೆಂದರೇನು? ವಿವಾಹವನ್ನು ಯಾತಕ್ಕಾಗಿ ಮಾಡಿಕೊಳ್ಳಬೇಕು? ಎನು ವುದನ್ನೂ ಕೂಡಾ ಅವರು ಅರಿಯಲಾರರು. ಇದಕ್ಕೊಂದು ಉದಾಹರಣೆಯನ್ನು ತಿಳಿಸುವೆನು. ಒಂದೂರಿನಲ್ಲಿ ಮೂರು ವರ್ಷ ವಯಸ್ಸುಳ್ಳ ಹೆಣ್ಣುಮಗುವಿನ ವಿವಾಹ ಮಾಡಲು ನಿಶ್ಚೈಸಿ ಅದಕ್ಕೆ ಚಪ್ಪರಗಳನ್ನೂ ಇನ್ನು ಬೇಕಾದ ಸಲಕರಣೆಗಳನ್ನು ಒದಗಿಸುತ್ತಿದ್ದರು. ಇದನ್ನೆಲ್ಲಾ ನೋಡುತ್ತಿದ್ದ ಆ ಮಗುವಿಗೆ, ಯಾತಕ್ಕೋಸ್ಕರ ಇಷ್ಟು ಏರ್ಪಾಡುಗಳನ್ನು ಈ ರೀತಿ ಮಾಡುತ್ತಿರುವರೋ ತಿಳಿಯದೆ ತಾಯಿಯ ಬಳಿ ಬಂದು ನಿಂತಿತು. ತರುವಾಯ ತಾಯಿಗೂ ಮಗುವಿಗೂ ಈ ರೀತಿಯ ಸಂಭಾಷಣೆ ಜರುಗಿತು.

ಮಗು: ಅಮ್ಮಾ, ನಮ್ಮ ಮನೆಯಲ್ಲಿ ಇಷ್ಟು ಸಂಭ್ರಮವಾಗಿರುವುದಲ್ಲ ಇದಕ್ಕೆ ಕಾರಣವೇನು?

ತಾಯಿ: ಮಗು, ನಿನಗೆ ನಾಳೆ ಮದುವೆಯಮ್ಮ.

ಮಗು: ಅಮ್ಮ, ಮದುವೆಯೆಂದರೆ–ಏನು?

ತಾಯಿ: ಮದುವೆಯೆಂದರೆ ಮಾಂಗಲ್ಯಧಾರಣೆ ಮಾಡುವುದು.

ಮಗು: ಅಮ್ಮ, ಮಾಂಗಲ್ಯಧಾರಣೆಯೆಂದರೇನು?

ತಾಯಿ: ಮಗೂ, ಇಲ್ಲಿ ನೋಡು, ನನ್ನ ಕತ್ತಿನಲ್ಲಿ

ರುವುದಲ್ಲಾ ಇದಕ್ಕೆ ಮಾಂಗಲ್ಯವೆಂದು ಹೆಸರು. ಮದುವೆಯ ದಿನ ಇಂಥಾದನ್ನೇ ನಿನಗೂ ಕಟ್ಟುವರು (ಎಂದು ಹೇಳಿ ತನ್ನ ಕತ್ತಿನಲ್ಲಿರುವ ಮಾಂಗಲ್ಯವನ್ನು ಮಗುವಿಗೆ ತೋರಿಸಿದಳು).

ಮಗು: ನಿನ್ನ ಕತ್ತಿನಲ್ಲಿರುವುದನ್ನು ತೆಗೆದು ನೀನೆ ನನ್ನ ಕತ್ತಿನಲ್ಲಿ ಕಟ್ಟಿಬಿಡಬಾರದೆ! ಇದಕ್ಕಾಗಿ ಇಷ್ಟು ಸಂಭ್ರಮವೇತಕ್ಕೆ? ಒಡ್ಡಾಟವೇತಕ್ಕೆ, ಕಷ್ಟ ವೇತಕ್ಕೆ?

ತಾಯಿ: ಮಗೂ, ಹೆಂಗಸರು ಮಾಂಗಲ್ಯವನ್ನು ಕಟ್ಟಕೂಡದು ನಿನ್ನ ಗಂಡನಾಗುವವನು ಕಟ್ಟಬೇಕು.

ಮಗು: ಅಮ್ಮಾ, ಹಾಗಾದರೆ ನಿನಗೆ ಕಟ್ಟಿದ ವರಾರು?

ತಾಯಿ: ನಿಮ್ಮ ತಂದೆಯು ನನಗೆ ಕಟ್ಟಿದರು,

ಮಗು: ಅಮ್ಮಾ, ಹಾಗಾದರೆ ನನಗೂ ಅಪ್ಪನೇ ಕಟ್ಟಲಿ, ಇಲ್ಲದಿದ್ದರೆ ಅಣ್ಣ ಕಟ್ಟಲಿ, ಅಲ್ಲದಿದ್ದರೆ ಪರಿ ಚಾರಕ ರಾಮನು ಕಟ್ಟಲಿ. ಯಾರಾದರೂ ಗಂಡ ಸರು ತಾನೇ ಕಟ್ಟಬೇಕು? ಎಂದಿತು.

ಏನೂ ತಿಳಿಯದ ಇಂಥ ಬಾಲ ಹಸುಳೆಗಳಿಗೆ ವಿವಾಹವನ್ನು ಮಾಡುವುದರಿಂದಾಗುವ ಪ್ರಯೋಜನ ವೇನೆಂಬುದನ್ನು ಸಭಿಕರೇ ಊಹಿಸಿಕೊಳ್ಳಬೇಕಾಗಿ ರುವುದು.

ಈ ಹಳೆಯ ಪದ್ಧತಿಗಳೆಲ್ಲಾ ಈ ನಾಗರೀಕ ಕಾಲದಲ್ಲಿ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಈಗಲೂ ಹಾಗೆಯೇ ನಡೆಯುತ್ತಿರುವುದು. ಘನ ಹೊಂದಿದ ಶ್ರೀಮನ್ಮಹಾರಾಜಾ ಸರ್ಕಾರದವರು ತಮ್ಮಿಂದಾ ದಷ್ಟು ಪ್ರಯತ್ನ ಮಾಡಿ ಏಳು ವರ್ಷಗಳೊಳಗೆ ಮದುವೆ ಮಾಡಕೂಡದೆಂದು ನಿಬಂಧನೆ ಮಾಡಿರುವ ವರು. ಎಷ್ಟೋ ಜನರು ತಮ್ಮ ಆಚಾರವನ್ನು ಬಿಡದೆ ನೆರವೇರಿಸಿಕೊಳ್ಳುತ್ತಿರುವರು. ಇವರು ಹತ್ತು ವರ್ಷ ಗಳಾದ ನಂತರ ಪುತ್ರಿಯರಿಗೆ ವಿವಾಹ ಮಾಡಿದರ ತಮ್ಮ ಜಾತಿಯೇ ಹೋಗುವುದೆಂದೂ, ಮಠಾಧಿಪತಿ ಗಳು ತಮಗೆ ಬಹಿಷ್ಕಾರ ಹಾಕುವರೆಂದೂ ಹೆದರಿ ಈ ರೀತಿ ಆಚರಿಸುತ್ತಿರುವರು. ಇವರು ಪೂರ್ವಾಚರ ವನ್ನು ಆಚರಿಸಿದರೆ ಇದರ ಫಲವನ್ನನುಭವಿಸುವರು ಯಾರು? ಕೇವಲ ಅರಿವಿಲ್ಲದ ಬಾಲಪ್ರಾಯದ ಕನ್ಯೆಯರು ಅಲ್ಲವೆ? ಕೊನೆಯ ಪಕ್ಷ ಹದಿಮೂರು ಹದಿನಾಲ್ಕು ವರ್ಷಗಳಾದರೂ ವಿವಾಹ ಮಾಡುವು ದಾದರೆ ದೇಶಕ್ಕೆಷ್ಟೊ ಮೇಲುಂಟಾಗುವುದು. ವಿವಾಹ ವಾದ ಕೂಡಲೇ ವ್ಯಾಸಂಗಕ್ಕೆ ಕಳಿಸುವುದು ಕೂಡ ದೆಂದು ಮುಷ್ಕರ ಹಿಡಿಯುವುದರಿಂದ ಹೆಣ್ಣು ಮಕ್ಕಳು ಯಾವ ಕೆಲಸಕ್ಕೂ ಬಾರದೆ ವಿದ್ಯಾಹೀನೆಯರಾಗು ವರು. ಪೂರ್ವಕಾಲದಲ್ಲಿ ದೀರ್ಘ ದೇಹಿಗಳೂ ಕಾಯಪುಷ್ಠಿಯುಳ್ಳವರೂ ಆಗಿದ್ದ ಈಗ ಕಡಲೇ ಗಿಡಕ್ಕೆ ಏಣಿಯನ್ನು ಹಾಕುವರೆನ್ನುವುದಕ್ಕೆ ಸರಿಯಾಗಿ ರುವವರು. ಈಗಿನವರು ಪೂರ್ವಕಾಲದವರಿತಂತ ಬಲ ಹೀನರೂ ರೋಗಿಷ್ಟೆಯರೂ ಆಗಿರುವರು. ಇದ ಕ್ಕೆಲ್ಲಾ ಬಾಲ್ಯವಿವಾಹವು ಮೂಲ ಕಾರಣವೆಂದು ಹೇಳ ದೆಯೇ ತಿಳಿಯುವುದು. ಇನ್ನು ನಮ್ಮ ಈ ಭರತ ಖಂಡವು ಏಳಿಗೆಗೆ ಬರಬೇಕಾದರೆ, ಬಲಶಾಲಿಗಳೂ, ಶೂರರೂ, ವಿದ್ಯಾವಂತರೂ ಆದ ಭಾರತಪುತ್ರರೂ ಉದಯಿಸಬೇಕಾದರೆ ಬಾಲ್ಯವಿವಾಹವು ನಿಂತು ಪ್ರೌಢ ವಿವಾಹವು ಆಚರಣೆಗೆ ಬಂದ ಹೊರತು ಅಸಾಧ್ಯವು. ನಮ್ಮ ಭರತಖಂಡದಲ್ಲಿರುವಷ್ಟು ವಿಧವೆಯರು ಪ್ರಪಂ ಚದ ಇನ್ಯಾವ ಭಾಗದಲ್ಲಿಯೂ ಇಲ್ಲವೆಂಬುದು ಸರ್ವ ರಿಗೂ ತಿಳಿದಿರುವುದು. ಇದಕ್ಕೆ ಕಾರಣವು ಬಾಲ್ಯವಿ ವಾಹವೇ ಮುಖ್ಯ ಕಾರಣವೆಂದು ಹೇಳದೆಯೇ ತಿಳಿ ಯುವುದಿಲ್ಲವೆ? ಅನೇಕ ಪೂರ್ವಕಾಲದ ವೃದ್ಧ ಸ್ತ್ರೀ ಯರನ್ನು ಕೇಳಿದರೆ ತಮಗೆ ಮದುವೆಯಾದದ್ದೇ ತಿಳಿ ಯದೆಂದೂ, ಕೆಲವರೂ ತಮ್ಮ ಗಂಡನ ಮುಖವನ್ನೇ ಕಾಣೆವೆಂದು ಮತ್ತೆ ಕೆಲವರು ಹೇಳಿದರು. ನಮ್ಮ ದೇಶ ದ ವಿಧವೆಯರನ್ನು ಅವರ ಶೋಚನೀಯವಾದ ಸ್ಥಿತಿ ಯನ್ನು ನೆನಸಿಕೊಂಡರೆ ಎಂತಹ ಕಟುಕರ ಮನಸ್ಸು ಕರಗಿ ನೀರಾಗಿ ಹೋಗುವುದು. "ಅವರವರ ಹಣೆಬ ರಹವನ್ನು ಅವರವರೇ ಅನುಭವಿಸಬೇಕು. ಅದನ್ನು ತಡೆಗಟ್ಟಲು ನಮ್ಮಿಂದ ಸಾಧ್ಯವೇ" ಎಂದು ಹೇಳಬ ಹುದು. ಆರು ವರ್ಷಕ್ಕೆ ಮದುವೆ ಮಾಡುವು ದನ್ನು ನಿಲ್ಲಿಸಿ, ಹನ್ನೆರಡು ವರ್ಷಕ್ಕೆ ಮದುವೆ ಮಾಡುವುದೂ ಕೂಡಾ ನಮ್ಮಿಂದ ಅಸಾ ಧ್ಯವೆ? ಈ ವಿಷಯದಲ್ಲಿ ಸರ್ಕಾರದವರು ಅನೇಕಾನೇಕ ಮಹನೀಯರೂ ಎಷ್ಟೋ ಪಾಡುಪ ಡುತ್ತಲಿವರು. ಅನೇಕಾನೇಕವಾಗಿ ಸ್ತ್ರೀಯರ ಮಾತೇ ವಿಶೇಷವಾಗಿ ನಡೆಯುವುದರಿಂದ ಈ ವಿಷ

ಯದಲ್ಲಿ ಸ್ತ್ರೀಯರು ಮನಸ್ಸು ಮಾಡಿದರೆ ಯಾವುದು ಅಸಾಧ್ಯವಲ್ಲ. ಸ್ತ್ರೀಯರು ಈ ವಿಷಯದಲ್ಲಿ ಮನಸ್ಸು ಮಾಡಿ ಈ ಪದ್ಧತಿಯನ್ನು ನಿಲ್ಲಿಸಿ ಹದಿಮೂರು ವರ್ಷಗಳ ನಂತರ ವಿವಾಹ ಮಾಡುವುದನ್ನು ಆಚರಣೆಯಲ್ಲಿ ತರಬೇಕು

೧೯೧೮-(ಮಹಿಳಾ ಸಖಿ)
ಸಂಪುಟ—೧೭
ಆಗಸ್ಟ್-೧೯೧೮-ಸಂ.೧೧

---

## ಕಿಶೋರಿ

ನೆರಳುಗಳ ಹಿಂದೆ ಜಾರುವ
ಇರುಳ ಕತ್ತಲ ಕೋಣೆಯಲ್ಲಿ [illegible] ಕಿಶೋರಿ
ಹೊತ್ತಾರೆಯ ಹೊತ್ತನು ಮೀಸಲಿಡುವಳು ತನಗಾಗಿ
ಮೌನದುಡೆಗೆಯ ಉಟ್ಟು ಬಾಲೆ

ಮನುಜ ನಿರ್ಮಿತ ಕಾನನದಲ್ಲಿ
ಮನದಲ್ಲಿ ಬಿರುಕು ಬಿಟ್ಟ ಎಳೆಯಂತೆ
ಮುಂಭಾಗುವಳು ಕಟ್ಟಿಗೆಯನ್ನಾಯ್ದುಕೊಳ್ಳಲು
ತೆರೆಯುವಳು ಕಿವಿಯ ತಲ್ಲಿನತೆಯಿಂದ
ಮಾತನಾಡುವವರ ಮಾತಿಗೆ

ಸೀಳು ಛಾಯೆಯ ತುಣುಕುಗಳ ಹಿಡಿದಬಾಲೆ

ಗಾಳಿಯಂತೆ ಗಿರಕಿಹೊಡೆಯುತ್ತದೆ ಕಾಲ ಆವಳ ಸುತ್ತ
ಅವಳ ದನಿಯಲ್ಲಡಗಿದೆ ಬಿರುಯ ಬಿರುಸು
ಆವಳಿಗಿಲ್ಲ ಆಯ್ಕೆಯ ಹಾದಿ

ಅವಳ ಭಾವನೆಗಳು ಪುಟ್ಟ ಮೀನಿನಂದದಿ
ಜಾರುವುವು ಕೈಗಳಿಗೆ ಸಿಗದ ತೆರದಿ

ರೂಪಾಂತರ
ಗೀತ ಜಿ.ಎಸ್

## ದಾಖಲಾಗದ ಮಹಿಳೆಯರ ದುಡಿಮೆ

ಬಹಳಷ್ಟು ಮಹಿಳೆಯರು ಇಂದು ಆರ್ಥಿಕರಂಗದಲ್ಲಿ ಕಾಲಿಡುತ್ತಿದ್ದಾರೆಯಾದರೂ ಅವರ ಭಾಗವಹಿಸುವಿಕೆ ಮಾತ್ರ ಅಂಕಿ ಅಂಶಗಳಲ್ಲಿ ಸೇರಿಲ್ಲವೆಂದು ಅಂತರ ರಾಷ್ಟ್ರೀಯ ಕಾರ್ಮಿಕ ಸಂಸ್ಥೆ ತನ್ನ ಇತ್ತೀಚಿನ ವರದಿಯಲ್ಲಿ ತಿಳಿಸಿದೆ.

ಈ ಸಂಸ್ಥೆಯು ನಡೆಸಿದ ಸಮೀಕ್ಷೆಯಂತೆ ಕೃಷಿಕ್ಷೇತ್ರದಲ್ಲಿ ಸಾವಿರಾರು ಮಹಿಳೆಯರು ಕೆಲಸಮಾಡುತ್ತಿದ್ದರೂ ಅದುಗಣನೆಗೆ ದಕ್ಕುತ್ತಿಲ್ಲ. ಅವರ ಅದೃಶ್ಯ ದುಡಿಮೆ ಅಂಕಿ-ಅಂಶಗಳು ಕೌಟುಂಬಿಕ ಚೌಕಟ್ಟಿನೊಳಗೆಯೇ ವ್ಯಾಪಾರ ವ್ಯವಹಾರ ನಡೆಸುವ ವೇತನಾರಹಿತ ಸ್ತ್ರೀಯರು ದುಡಿಮೆ ಗಣನೆಗೆ ಸಿಗುವುದೇ ಇಲ್ಲ.

ಮಹಿಳೆಯರ ದುಡಿಮೆ ದಾಖಲಾಗದಿರುವುದರಿಂದ ನಮಗೆ ದೊರಕುವ ಚಿತ್ರಣ ಸತ್ಯಕ್ಕೆದೂರವಾದುದು. ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರ ಗಣನೀಯ ಪಾತ್ರವನ್ನು ನಿರ್ಲಕ್ಷಿಸಿದಂತಾಗುತ್ತದೆ. ಈ ವೇತರಹಿತ ಮಹಿಳೆಯರ ಹಾಗೂ ಅವರ ಅದೃಶ್ಯ ದುಡಿಮೆ ಇದು ದಾಖಲಾಗುವುದು ಅತ್ಯಗತ್ಯವಾಗಿದೆಯುಲ್ಲದೆ, ಆರ್ಥಿಕಬೆಳವಣಿಗೆಯಲ್ಲಿ ಮಹಿಳೆಯರ ಮಹತ್ವದ ಪಾತ್ರವನ್ನು ಗುರುತಿಸಬೇಕಾಗಿರುವುದು ಅಗತ್ಯವೆಂದು ಅಂತರ ರಾಷ್ಟ್ರೀಯ ಕಾರ್ಮಿಕ ಸಂಸ್ಥೆ ತಿಳಿಸುತ್ತದೆ.

---

## ಈಗ ಶೀಬಾ ಹಾಡುತ್ತಾಳೆ.

ಶತಮಾನಗಳು ದಾಖಲಿಸಿವೆ ನನ್ನ ಚಹರೆಗಳ
ಕೆಫೆ ಮತ್ತು ಮಂದಿರಗಳಲ್ಲಿ
ನೀರಂಚಿನ ಗುಂಟ
ನಾನು ಕಾಡೆ ಬಿಡುಗಡೆಯ ಹೆದಗುಗಳ ಬರುವಿಗೆ
ಬಿಕರಿಯ ರಂಗಮಂದಿರದ ಮೇಲೆ
ಗಂಡಸರು ತಮ್ಮ ಪೌರುಷ ಪ್ರದರ್ಶಿಸಿಕೊಂಡರು
ಹಿಡಿಯಲಾಗದ ನನ್ನ ತೊಡೆಯ ಹಿಡಿ ಗಾತ್ರದಲ್ಲಿ

(ಆಧಾರ)ಮಾಯಾ ಏಂಜೆಲೊ

" ಹೆಣ್ಣು ಶಿಶುವಿನ ವರ್ಷದ ನೆನಪಿಗಾಗಿ....... "

# ಬಾಲಕಿಯರ ಮೇಲಿನ ಲೈಂಗಿಕ ಹಿಂಸೆ

ನಮ್ಮ ಸಂಸ್ಕೃತಿಯು ಎಷ್ಟು ಅಮಾನುಷವಾಗಿದೆ ಯೆಂದರೆ ಒಂದು ವರ್ಷ ವಯಸ್ಸಿನ ಎಳೆಯ ಹೆಣ್ಣು ಮಗುವಿನ ಮೇಲೆ ನಡೆಯುವ ಅಮಾನುಷ ಲೈಂಗಿಕ ಹಿಂಸೆಗೆ ತನ್ನ ಒಪ್ಪಿಗೆಯ ಮುದ್ರೆಯನ್ನು ಒತ್ತುತ್ತದೆ. ಸಾಮಾನ್ಯವಾಗಿ ಈ ಎಳೆ ಹಸುಳೆಗಳ ಮೇಲೆ ನಡೆ ಯುವ ಲೈಂಗಿಕ ಹಿಂಸೆ ನಾಲ್ಕು ಗೋಡೆಯೊಳಗಿನಲ್ಲಿ ರುವ ಯಾರಿಗೂ ತಿಳಿಯದೇ ಹೋಗುವ ಪ್ರಸಂಗ ಗಳೇ ಹೆಚ್ಚು. ಈ ಅರ್ಥವಾಗದ ಹಿಂಸೆಗೆ ಒಳ ಗಾಗುವ ಮನಸ್ಸುಗಳು ಮಾತ್ರ ಹೇಳಲು ಹಿಂಜ ರಿದು ಒಳಗೊಳಗೆ ಮುದುಡಿ ಗೊಂದಲದಿಂದ ನರ ಳುತ್ತವೆ. ಈ ಮನಸ್ಸುಗಳ ರೋಧನ ಕಲ್ಪನಾತೀತ ವಾದುದು. ಮನಸ್ಸು ದೇಹದ ಮೇಲೆ ಒಮ್ಮೆ ಉಂ ಟಾದ ಆಘಾತ ಮಾಗದ ಗಾಯವಾಗಿ ಬದುಕಿ ನುದ್ದಕ್ಕೂ ನೆರಳಿನಂತೆ ಹಿಂಬಾಲಿಸುತ್ತದೆ. ಮೃದು ಮನಸ್ಸು ದೇಹದ ಮೇಲೆ ನಡೆಯುವ ಈ ಘೋರ ದುರಾಚಾರವನ್ನು ಒಪ್ಪಿಕೊಳ್ಳಲಾಗದೆ, ಇತರರೊಂದಿಗೆ ಹಂಚಿಕೊಳ್ಳಲಾಗದೆ ಅನುಭವಿಸುವ ನೋವು ಸಾಮಾನ್ಯ ಗ್ರಹಿಕೆಗೂ ನಿಲುಕಲಾಗದ್ದು.

ಪುಟ್ಟ ಬಾಲಕಿಯರ ಮೇಲೆ ನಡೆಯುವ ಲೈಂ ಗಿಕ ಹಿಂಸೆ, ಪರೋಕ್ಷವಾಗಿ ನಡೆಸುವ ಲೈಂಗಿಕ ಹಿಂಸೆ ಯೊಂದಿಗೆ ಭಾಷೆ, ಮೂಲಕವೂ ಇಂತಹ ಹಿಂಸೆ ಯನ್ನು ಎಸಗಲಾಗುತ್ತದೆ.

ಒತ್ತಾಯ, ಬಲವಂತದಿಂದ ಹಿಂಸಿಸುವುದು, ಆಮಿಷಗಳನ್ನೊಡ್ಡಿ ಬಲೆಗೆ ಬೀಳಿಸಿಕೊಳ್ಳುವುದು, ಮುಂ ತಾದವುಗಳ ಮೂಲಕ ಪುಟ್ಟ ಬಾಲಕಿಯರ ಮೇಲೆ ಅತ್ಯಾಚಾರವೆಸಗಲಾಗುತ್ತದೆ. ಸುಮಾರು ೧೦—೧೨ ವರ್ಷದೊಳಗಿನ ಹುಡುಗಿಯರ ಮೇಲೆ ನಡೆವ ಅತ್ಯಾಚಾರಗಳು ಸಾಮಾನ್ಯವಾಗಿ ಮನೆಯಲ್ಲಿನ ಪುರುಷ ಸದಸ್ಯರಿಂದ, ಸಂಬಂಧಿಕರಿಂದ, ನೆರೆಹೊರೆ ಯವರಿಂದ ನಡೆಯುತ್ತದೆ. ಅಣ್ಣ ತಮ್ಮಂದಿರು, ತಂದೆ ಅವಿಭಕ್ತ ಕುಟುಂಬಗಳಾಗಿದ್ದರೆ, ಚಿಕ್ಕಪ್ಪ, ಸೋದರ ಮಾವಂದಿರು, ನೆರೆಹೊರೆಯಲ್ಲಿ ವಾಸಿಸುವ ಪರಿಚಿತ ಪುರುಷರು, ಇಂತಹ ಕೃತ್ಯವನ್ನು ಮಾಡುತ್ತಾರೆ. ಹಬ್ಬ ಹರಿದಿನಗಳಲ್ಲಿ, ಮದುವೆ ಸಮಾರಂಭಗಳಲ್ಲಿ ಭಾಗ ವಹಿಸುವ ಪುರುಷರು ಈ ದುಷ್ಕೃತ್ಯವನ್ನು ಎಸಗಿದ ನಿದರ್ಶನಗಳೂ ಇವೆ.

ಮನೆಯಲ್ಲಿ ಯಾರೂ ಇಲ್ಲದ ಸಂದರ್ಭದಲ್ಲಿ ಅಥವಾ ಮನೆಗಳು ದೊಡ್ಡವಾಗಿದ್ದು, ನಿರ್ಜನವಾಗಿ ರುವ ಕೊಠಡಿಗಳಲ್ಲಿ, ಗದ್ದೆ ಹಿತ್ತಲುಗಳಲ್ಲಿ ಎಳೆಯ ಹೆಣ್ಣು ಮಕ್ಕಳನ್ನು ಎಳೆದುಕೊಂಡು ಹೋಗಿ ಬಲ ಪ್ರಯೋಗಿಸಿ ಅತ್ಯಾಚಾರವೆಸಗಲಾಗುತ್ತದೆ. ಅಸ ಹಾಯಕರಾದ ಹುಡುಗಿಯರು ಪ್ರತಿಭಟಿಸಲಾಗದೆ ಈ ದೌರ್ಜನ್ಯವನ್ನು ಒಪ್ಪಿಕೊಳ್ಳುತ್ತಾರೆ. ಕೂಗಿ, ಗಲಾಟೆ ಮಾಡುವ ಪ್ರಯತ್ನವನ್ನು ಮಾಡಿದರೂ, ಬಾಯಿಗೆ ಬಟ್ಟೆ ತುರುಕಿಯೋ, ಬಿಗಿಯಾಗಿ ಬಾಯಿಯನ್ನು ಮುಚ್ಚಿಯೊ ಹಿಂಸಿಸಲಾಗುತ್ತದೆ. ವ್ಯಕ್ತಿಯೊಬ್ಬ ಏನು ಮಾಡುತ್ತಿದ್ದಾನೆಂಬ ಅರಿವು ಇಲ್ಲದ ವಯಸ್ಸಿನಲ್ಲಿ ಪ್ರತಿ ಭಟಿಸುವ ಮಾತು ದೂರವಾದದ್ದು.

ಎಳೆಯ ಬಾಲಕಿಯರಿಗೆ ಆಮಿಷಗಳನ್ನೊಡ್ಡಿ ಅತ್ಯಾಚಾರ ಎಸಗುವುದು ತೀರಾ ಸಾಮಾನ್ಯ. ಹಣ ಕಾಸು ಕೊಡುವುದು, ತಿಂಡಿತಿನಿಸುಗಳನ್ನು ಕೊಡಿ ಸುವುದು, ಶೃಂಗಾರ ಸಾಧನಗಳನ್ನು ಕೊಂಡುಕೊ ಡುವುದು, ಆತ್ಮೀಯತೆಯ ನೆಪ ಒಡ್ಡುವುದು ಮುಂ ತಾದ ಪೂರಕ ಕೃತಕಸನ್ನಿವೇಶಗಳನ್ನು ಸೃಷ್ಟಿಸಿ ಈ ಬಾಲೆ ಯರು ಇಂತಹ ಕೃತ್ಯವನ್ನು ಒಪ್ಪಿಕೊಳ್ಳುವಂತೆ ಮಾಡ

24ನೇ ಪುಟ ನೋಡಿ.

# ದುಡಿಯುವ ಮಹಿಳೆಯರ ರಾಜ್ಯ ಸಮಾವೇಶ

ನಮ್ಮ ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದು ೪೨ ವರ್ಷಗಳು ಕಳೆದಿದ್ದರೂ ವಿವಿಧ ಕ್ಷೇತ್ರಗಳಲ್ಲಿ ದುಡಿಯುವ ಅಸಂಖ್ಯಾತ ಮಹಿಳೆಯರು ಇಂದಿಗೂ ಅನೇಕ ರೀತಿಯ ಸಂಕಷ್ಟಗಳನ್ನು ಎದುರಿಸುತ್ತಿದ್ದಾರೆ. ಹಲವು ಕ್ಷೇತ್ರಗಳಲ್ಲಿ ವರ್ಷಾನುಗಟ್ಟಲೆ ಕೆಲಸ ಮಾಡಿದರೂ ಖಾಯಂಗೊಳಿಸದಿರುವುದು, ಪುರುಷರು ಮಾಡುವ ಕೆಲಸವನ್ನು ಮಹಿಳೆಯರು ಮಾಡಿದಾಗ ಅವರಿಗೆ ಪುರುಷರಿಗಿಂತ ಕಡಿಮೆ ಸಂಬಳ ಕೊಡುವುದು. ಮಹಿಳೆಯರಿಗೆ ಕೆಲಸದಲ್ಲಿ ಬಡ್ತಿ ನಿರಾಕರಣೆ, ಕಾನೂನು ಬಾಹಿರವಾಗಿ ರಾತ್ರಿ ಪಾಳಿಯಲ್ಲಿ ದುಡಿಸುವುದು, ಹೆರಿಗೆ ಭತ್ಯೆ ನಿರಾಕರಣೆ, ಫ್ಯಾಕ್ಟರಿಗಳಲ್ಲಷ್ಟೇ ಅಲ್ಲದೆ ಸರ್ಕಾರೀ ವಲಯಗಳಲ್ಲಿ ನಾಲ್ಕನೇ ವೇತನ ಆಯೋಗವು ಎರಡು ಹೆರಿಗೆಗಳಿಗೆ ಮಾತ್ರ ಸೀಮಿತಗೊಳಿಸುವುದು, ಕೆಲವು ಕ್ಷೇತ್ರಗಳಲ್ಲಿ ಕುಟುಂಬ ಯೋಜನಾ ಶಸ್ತ್ರಚಿಕಿತ್ಸೆ ಆದವರನ್ನು ಮಾತ್ರ ಕೆಲಸದಲ್ಲಿ ಖಾಯಂ ಮಾಡುವುದು, ರಿಟ್ರೆಂಚ್‌ಮೆಂಟ್, ಕೆಲಸದ ಭಾರ, ಮೇಲ್ವಿಚಾರಕರ ಮತ್ತು ಮೇಲಧಿಕಾರಿಗಳ ದಬ್ಬಾಳಿಕೆ, ದೌರ್ಜನ್ಯ, ಕೆಲಸ ಮಾಡುವ ಸ್ಥಳಗಳಲ್ಲಿ ಮೂತ್ರಿಗಳು, ಕಕ್ಕಸ್ಸು ನೀರಿನ ವ್ಯವಸ್ಥೆ, ವಿಶ್ರಾಂತಿ ಕೋಣೆಗಳು ಇಲ್ಲದಿರುವಂತ, ಬೆಂಗಳೂರು ಮತ್ತು ಇನ್ನಿತರ ಮಹಾನಗರಗಳಲ್ಲಂತೂ ಸಾರಿಗೆ ಸಮಸ್ಯೆ ತೀವ್ರವಾಗಿದ್ದು, ಇವೇ ಮೊದಲಾದ ಅನೇಕ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ ತನ್ನ ೧೯೭೦ರ ವರದಿಯಲ್ಲಿ ತಿಳಿಸಿದಂತೆ, ಕಾನೂನಿನ ರಕ್ಷಣೆ ಇದ್ದರೂ ಕೂಡ ಮಹಿಳೆಯರ ಶೋಷಣೆ ನಡೆಯುತ್ತಲೇ ಇದೆ.

ನಮ್ಮ ರಾಜ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೆಲಸ ಮಾಡುವ ಕಾರ್ಮಿಕ ಕ್ಷೇತ್ರಗಳಾದ ಬೀಡಿ, ಪ್ಲಾಂಟೇಷನ್, ಕಾಫಿ ಕ್ಯೂರಿಂಗ್ ವರ್ಕ್ಸ್. "ಪ್ರಾನ್ಸಿಂಗ್ — ಪ್ಯಾಕಿಂಗ್ ಕಾರ್ಖಾನೆಗಳು" ಕೃಷಿ ಕ್ಷೇತ್ರ ಹಾಗೂ ಇನ್ನಿತರ ಅನೇಕ ಕಡೆ ಮಹಿಳೆಯರ ಸಂಖ್ಯೆ ಅಧಿಕವಿದ್ದು. ಅವರು ಆಳುವ ವರ್ಗದ ಆರ್ಥಿಕ ಹಾಗೂ ಕೈಗಾರಿಕಾ ನೀತಿಯ ಫಲವಾಗಿ ಉದ್ಭವಿಸಿರುವ ಬಿಕ್ಕಟ್ಟಿನ ಭಾರವನ್ನು ಎದುರಿಸಬೇಕಾದವರಲ್ಲಿ ಅವರೇ ಮೊದಲಿಗರಾಗಿದ್ದಾರೆ. ಬೀಡಿ ಉದ್ಯಮದಲ್ಲಿಯ ಬಿಕ್ಕಟ್ಟಿನಿಂದಾಗಿ ಈ ಮಹಿಳೆಯರಿಗೆ ವಾರಕ್ಕೆ ಕೇವಲ ಎರಡು ದಿನಗಳು ಮಾತ್ರ ಕೆಲಸ ಮಾಡಬೇಕಾದ ಪರಿಸ್ಥಿತಿಯಿಂದಾಗಿ ಅರೆ ನಿರುದ್ಯೋಗದಿಂದ ತತ್ತರಿಸುತ್ತಿದ್ದಾರೆ. ನಮ್ಮ ದೇಶಕ್ಕೆ ಕೋಟ್ಯಾಂತರ ರೂಪಾಯಿ ವಿದೇಶೀ ವಿನಿಮಯ ಗಳಿಸುವ ಕಾಫೀ, ಟೀ ತೋಟ ಕಾರ್ಮಿಕರ ಪೈಕಿ ಅರೆವಾಸಿಯಷ್ಟು ಮಹಿಳೆಯರಿದ್ದು, ಅವರ ಸ್ಥಿತಿ ಚಿಂತಾಜನಕವಾಗಿದೆ. ಎಲ್ಲಾ ರೀತಿಯ ಸೌಲಭ್ಯಗಳಿಂದ ವಂಚಿತರಾಗಿರುವುದಷ್ಟೇ ಅಲ್ಲದೆ, ಆಧುನಿಕ ಯಂತ್ರಗಳ ಅಳವಡಿಕೆಯಿಂದಾಗಿ, ಹತ್ತಾರು ಮೈಲಿ ದೂರದ ಹಳ್ಳಿಗಳಿಂದ ಬಂದು ಮೊದಲೇ ಕಡಿಮೆ ವೇತನಕ್ಕೆ ದುಡಿಯುತ್ತಿದ್ದವರು, ಇಂದು ದೊಡ್ಡ ಸಂಖ್ಯೆಯಲ್ಲಿ ಕೆಲಸ ಕಳೆದುಕೊಳ್ಳುತ್ತಿರುವವರಲ್ಲದೆ, ಉಳಿದವರೂ ಅತ್ಯಲ್ಪ ಸಂಬಳಕ್ಕೆ ದುಡಿಯಬೇಕಾದ ಪರಿಸ್ಥಿತಿ ಒದಗಿದೆ.

ಅಂಗನವಾಡಿಯಲ್ಲಿ ಕೆಲಸ ಮಾಡುವ ಅಸಂಖ್ಯಾತ ಶಿಕ್ಷಕಿಯರು ಮತ್ತು ಆಯಾಗಳು ತಿಂಗಳಿಗೆ ಕೇವಲ ೨೦೦ — ೨೫೦ ಮತ್ತು ೧೨೦ರೂನಂತೆ ವೇತನ ಪಡೆಯುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಪಾಳೆಯಶಾಹೀ ಶ್ರೀಮಂತರ ಕ್ರೂರ ದೌರ್ಜನ್ಯವನ್ನು ಎದುರಿಸಬೇಕಾಗಿದೆ. ನಮ್ಮ ರಾಜ್ಯದ ಅಲ್ಪಸಂಖ್ಯಾತ ಗುತ್ತಿಗೆ ಕೆಲಸಗಾರರು, ಕೃಷಿ ಕಾರ್ಮಿಕರು, ಖಾಸಗಿ ಶಾಲೆ — ಕಾಲೇಜುಗಳಲ್ಲಿ ಭದ್ರತೆ ಇಲ್ಲದೆ ಕಡಿಮೆ ಸಂಬಳ ಪಡೆದು, ಹೆಚ್ಚಿನ ಸಂಬಳಕ್ಕೆ ಸಹಿ ಮಾಡುವಂಥಾ ಒತ್ತಡಗಳಿಗೆ ಅನೇಕ ವಿದ್ಯಾವಂತ ಮಹಿಳೆಯರೂ ಒಳಗಾಗಿದ್ದಾರೆ.

ಸಂಘಟಿತ ವಲಯಗಳಲ್ಲಿ ಬರುವ ಕೇಂದ್ರ ಸರ್ಕಾರಿ ಮತ್ತು ರಾಜ್ಯ ಸರ್ಕಾರಿ ಜೀವವಿಮಾ ಮತ್ತು ಬ್ಯಾಂಕ್ ಮಹಿಳಾ ನೌಕರರೂ ಬಾಲ ಪಾಲಿಕೆ ರಾತ್ರಿ ಪಾಳಿ ಕೆಲಸದ ಮೇಲೆ ಊರುಗಳಿಗೆ ಹೋದಾಗ ಉಳಿದುಕೊಳ್ಳಲು ಸಂರಕ್ಷಿತ ಸ್ಥಳಗಳಿಲ್ಲ, ದುಡಿಯುವ ಮಹಿಳೆಯರ ವಸತಿ ಗೃಹಗಳಲ್ಲಿ ತೊಂದರೆಯನ್ನು ಅನುಭವಿಸುತ್ತಿದ್ದಾರೆ.

14ನೇ ಪುಟ ನೋಡಿ.

# ಕತ್ತಲ ಹೂವಿನ ಹಾಡು

ಕಾವ್ಯವನ್ನು ಗಂಭೀರವಾಗಿ ತೆಗೆದುಕೊಂಡಿರುವ ಕೆಲವೇ ಮಹಿಳಾ ಲೇಖಕಿಯರಲ್ಲಿ ಒಬ್ಬರಾದ ಎಂ. ಆರ್. ಕಮಲಾ ಕಪ್ಪು ನೊಂದೊಡಲಿನಿಂದ ಮೂಡಿ ಬಂದ ಕಾವ್ಯಗಳನ್ನು ಕನ್ನಡಕ್ಕೆ ಅನುವಾದಿಸಿದ "ಕತ್ತಲ ಹೂವಿನ ಹಾಡು" ಪುಸ್ತಕ ಬಿಡುಗಡೆಯ ಸಮಾರಂಭವನ್ನು ದಿನಾಂಕ ೩೧.೩.೯೦ರಂದು ಏರ್ಪಡಿಸಲಾಗಿತ್ತು.

ಕಲ್ಯಾಣಿ ಪ್ರಕಾಶನದವರು ಪ್ರಕಟಿಸಿದ ಈ ಪುಸ್ತಕವನ್ನು ಡಾ॥ ಸಿದ್ಧಲಿಂಗಯ್ಯ ಅವರು ಬಿಡುಗಡೆ ಮಾಡುತ್ತಾ, ಸ್ವತಃ ಕವಯತ್ರಿರಾದ ಕಮಲಾ ಅವರು ಮಾಡಿದ ಈ ಅನುವಾದ ಕನ್ನಡದ ಕವಿತೆಗೆ ಸಹಾಯಕವಾಗಿದೆಯೆಂದರು.

ಯಾತನೆಯಿಂದ ರೂಪುಗೊಂಡ ಕಪ್ಪು ಲೇಖಕಿಯರ ಸಂಕಟ ಹಾಡಾಗಿದೆ. ಯಾತನಾ ಕವಿತೆಗಳಾಗಿವೆ. ಸಾಮೂಹಿಕ ಚಳುವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಈ ಕಪ್ಪು ನೆಲದ ಲೇಖಕಿಯರಲ್ಲಿ ಸಾಮಾಜಿಕ ಅಂಶವಿದೆಯೆಂದ ಅವರು ಒದುಕಿನ ವಿವಿಧ ಅನುಭವ ಅಲ್ಲಿ ಮಿಳಿತವಾಗಿದೆಯೆಂದರು. ಪ್ರೇಮ ಹಾಸ್ಯ ಸಾಮಾಜಿಕ ಅಂಶಗಳೆನ್ನೊಳಗೊಂಡ ಈ ಕವನಗಳು ಕಾವ್ಯಲೋಕಕ್ಕೆ ನ್ಯಾಯವನ್ನು ದೊರಕಿಸಿ ಕೊಟ್ಟಿದೆಯೆಂದು ಡಾ॥ ಸಿದ್ಧಲಿಂಗಯ್ಯ ನುಡಿದರು.

ಕತ್ತಲ ಹೂವಿನ ಹಾಡು ಪುಸ್ತಕವನ್ನು ಕುರಿತು ಮಾತನಾಡಿದ ಡಾ॥ ಅನುಪಮಾ ನಿರಂಜನ ಅವರು ನಮ್ಮ ಅನುಭವ ಹಾಗೂ ಕಪ್ಪು ಲೇಖಕಿಯರಲ್ಲಿರುವ ಅನುಭವಕ್ಕೆ ಸಾಮ್ಯತೆಯಿದೆಯೆನ್ನುತ್ತಾ ನಮ್ಮ ಬದುಕಿನ ಅನುಭವದ ತುಂಡುಗಳನ್ನು ಎತ್ತಿಕೊಂಡು ಕಾವ್ಯ ರಚಿಸಿದ್ದಾರೆಂದು ನುಡಿದರು. ಹೆಣ್ಣು ಅನುಭವಗಳು ಸಾಹಿತ್ಯಲೋಕವನ್ನು ಪ್ರವೇಶಿಸುವುದರ ಮೂಲಕ ಕನ್ನಡ ಕಾವ್ಯಲೋಕಕ್ಕೆ ಹೊಸ ಆಯಾಮವನ್ನು ನೀಡಿದೆಯೆಂದು ಡಾ॥ ನಿರಂಜನ ಹೇಳಿದರು.

ಪ್ಪು ಲೇಖಕಿಯರು ಬಂಧನದಿಂದ ವಿಮುಕ್ತಿ ಪಡೆದುಕೊಂಡಿರುವುದರಿಂದಲೇ ಅವರಿಂದ ಸೃಷ್ಟಿ ಕಾವ್ಯ ಸಾಧ್ಯವಾಗಿದೆ. ಕಪ್ಪು ಲೇಖಕಿಯರಲ್ಲಿ ಪ್ರತಿಭೆ ಪಾಂಡಿತ್ಯ ಹಾಗೂ ಸಾಮಾಜಿಕ ಕಾಳಜಿ ಒಟ್ಟಾ ಮೇಳೈಸಿದೆಯೆಂದ ಅನುಪಮಾ ಕಪ್ಪು ಸಾಹಿತ್ಯಕ್ಕೆ ಆಕಾರವನ್ನು ಕೊಟ್ಟವರು ಕಪ್ಪು ಲೇಖಕಿಯರು ಎಂದು ವಿಮರ್ಶಕರು ಹೇಳುವ ಸ್ಥಿತಿ ಇಂದು ಇದೆಯೆಂದರು. ಅಧ್ಯಕ್ಷತೆ ವಹಿಸಿದ ಕವಿ ರಾಮಚಂದ್ರ ಶರ್ಮ ಅವರು ಕವಿಯ ಮನಸ್ಸು ಹೆಣ್ಣುತನ, ಸಂಸ್ಕೃತಿಯ ಜೊತೆ ಬಹಿರಂಗ ದನಿ ಬೆರೆತಿದೆಯೆಂದರು. ಲೇಖಕಿ ಕಮಲ ಉತ್ತಮ, ಒಳ್ಳೆಯ ಅನುಭವವನ್ನು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ್ದಾರೆಂದರು.

## ಹಿಂಸೆ

ನಿನ್ನ ತಾಯಿಯನ್ನವರು ಹಿಂಸಿಸಿದಾಗ
ನೀನೊಂದು ಗಿಡವ ನೆಡು
ನಿನ್ನ ತಂದೆಯನ್ನವರು ಹಿಂಸಿಸಿದಾಗ
ನೀನೊಂದು ಗಿಡವ ನೆಡು
ನಿನ್ನ ಸೋದರ—ಸೋದರಿಯನ್ನವರು
ಹಿಂಸಿಸಿದಾಗ
ನೀನೊಂದು ಗಿಡವ ನೆಡು
ನಿನ್ನನ್ನವರು ಚಿತ್ರಹಿಂಸಿಸಿದಾಗ
ಮಾತನಾಡಲು ಒಂದು ಗಿಡವ ನೆಡು

ಗಿಡವ ಕಡಿಯಲು
ಕಾಡು ಕತ್ತರಿಸಲು
ಅವರು ಆರಂಭಿಸಿದರೆ
ಮತ್ತೆ ಇಂತಹದಿನ್ನೊಂದಕ್ಕೆ
ನಾಂದಿ ಹಾಡುತ್ತಿದ್ದಾರೆ

ಆಲೀಸ್ ವಾಕರ್

## ಪೀಳಿಗೆ

ನನ್ನಜ್ಜ, ಮುತ್ತಜ್ಜಿಯರು ಗಟ್ಟಿ-ಮುಟ್ಟಾಗಿದ್ದರು
ನೆಲ ಉತ್ತಿ, ಬೀಜ ಬಿತ್ತುತ್ತಿದ್ದರು.
ಹೊಲದ ಕಳೆ ಕೀಳುತ್ತಿದ್ದರು.
ಇಳೆಯನ್ನು, ಬೆಳೆಯನ್ನು ಮುಟ್ಟಿ ಮೈದಡವಿ
ಸುಗ್ಗಿ ಪದವ ಹಾಡುತ್ತಿದ್ದರು.
ನನ್ನಜ್ಜ ಮುತ್ತಜ್ಜಿಯರು ಗಟ್ಟಿ ಮುಟ್ಟಾಗಿದ್ದರು.

ನೆನಪಿನ ಬುತ್ತಿ ಚಿಗುರ ಅವರು ಹೊತ್ತು ತಂದಿದ್ದರು.
ಚುರುಕು ಕೈಗಳಲ್ಲಿ ಉಬ್ಬಿದ ಅವರ ನರನಾಡಿಗಳೇ
ಒದ್ದೆ ಮಣ್ಣಿನ, ಈರುಳ್ಳಿ ಬೆಳ್ಳುಳ್ಳಿಗಳ
ಘಮಲ ಉಸುರುತ್ತಿದ್ದವು:

ನಮಗಾಗಿ ಅವರ ಬಳಿ ನೂರು ಚೊಕ್ಕಟ
ಮಾತುಗಳಿದ್ದವು.

ನಮ್ಮ ಅಜ್ಜ ಮುತ್ತಜ್ಜಿಯರು
ಎಷ್ಟು ಗಟ್ಟಿಗಿತ್ತಿಯರು
ನಾನೇಕೆ ಅವರಂತೆ ಇಲ್ಲ.

ಮಾರ್ಗರೇಟ್ ವಾಕರ್,

## ಮುಖವಾಡ

ಎಷ್ಟು ತಣ್ಣಗಿನ ನಿರ್ಲಿಪ್ತ ಹೆಣ್ಣಿವಳು!
ಕಡು ಯಾತನೆಯಲ್ಲಿ ತಾನು ಕಳೆದ ದಿನಗಳನ್ನು
ಆತ್ಮದೊಳಗಣ ಗುಟ್ಟುಗಳನ್ನು ರಟ್ಟಾಗಿಸಲು ಬಿಡಳು.

ಇಡೀ ಜಗತ್ತನ್ನು ಕುಹಕದ ಕಣ್ಣಿಂದ ಕಾಣುತ್ತಾಳೆ.
ಭಾವನೆಗಳ ತೊನೆದಾಟವನ್ನು ಕಾಲಿನಿಂದೊದ್ದು
ಧಿಕ್ಕರಿಸುತ್ತಾಳೆ,
ನಿಟ್ಟುಸಿರು – ಕಣ್ಣೀರನ್ನೆಲ್ಲ ಅವಹೇಳನ ಮಾಡುತ್ತಾಳೆ.

ಆದರೊಮ್ಮೆ – ಪುಟ್ಟ ಕಂದನ ಎತ್ತಿಕೊಂಡು
ಹೆಣ್ಣೊಬ್ಬಳು
ಹಾದಿಯಲ್ಲಿ ಇವಳ ಬದಿ ಹಾದುಹೋದಳು.

ಇನ್ನೊಮ್ಮೆ – ಪ್ರಾಸಂಗಿಕವಾಗಿ ಯಾರದೋ
ಬಾಯಿಂದ
ವ್ಯಕ್ತಿಯೊಬ್ಬನ ಸಿಹಿ – ಕಹಿ ಹೆಸರನ್ನು ಕೇಳಿದಳು.
ದಿಗ್ಭ್ರಮೆಗೊಳಿಸುವಷ್ಟು ಹಂಬಲಿಕೆ ಅವಳ ಕಣ್ಣಾಲಿ
ಯಲ್ಲಿ
ಅಷ್ಟೇ ನೋವು ಅವಳ ಮುಖದಲ್ಲಿ.
ನಾನಿತ್ತ ತಿರುಗಿದೆ – ಅವಳ ಮುಖವಾಡ ಕಳಚುವನಕ.

ಕ್ಲಾರಿಸಾ ಸ್ಕಾಟ್ ಡಿಲೆನಿ,

## ಬಡತನದ ನಂಟು

ಬಡತನದೊಂದಿಗೆ ಹೆಜ್ಜೆಹಾಕದ ನಿನಗೆ
ಅರ್ಥವಾಗುವುದಿಲ್ಲ ಆಕೆಯರೂಪು – ರೇಷೆಗಳು
ಉದ್ದ ಅಗಲ ಆಳ ವಿಸ್ತಾರಗಳು
ಗುಳಿಬಿದ್ದ ಕಣ್ಣಿಗೆ, ಬತ್ತಿದ ಕೆನ್ನೆಗೆ
ನಿನ್ನ ಬೆರಳುಗಳ ಒಯ್ಯಲು ಮಾರ್ಗದರ್ಶಕರಾರೂ
ಇರುದಿವುಲ್ಲ

ನಿನ್ನ ಮುದ್ದು ಮುಖದ ಹೆಂಡತಿ
ಸೊರಗಿ ಕೃಶಾಂಗಿಯಾಗಿ – ಎದೆಬತ್ತಿ ಒಣಗಿ
ಬಡತನದ ರೂಪುರೇಷೆಗಳು ಆಕೆಯ ಮುಖದಲ್ಲಿ ಮೂಡು
ವನಕ

ಎಲ್ಲೋ ದೂರದ ಅಪರಿಚಿತ ಜನ ನಾಡು ನಗರದಲ್ಲಿ
ಪರಕೀಯ ಮುಖಗಳಲ್ಲಿ ಕಂಡ ಸುದ್ದಿ ತುಣುಕುಗಳಲ್ಲಿ
ಊಟವಿರದ ಖಾಲಿ ಗಂಗಳದಲ್ಲಿ
ನಿರ್ಜೀವ ಕಪ್ಪು ಕೈಗಳಲ್ಲಿ ಎದ್ದು ಕುಣಿದ ಬಡತನ
ಒಂದು ಕರಾಳ ರಾತ್ರಿ —
ಕಿಟಕಿಯಾಚೆ ನೀನು ಇಣುಕಿದಾಗ
ನಿನ್ನ ಹಿತ್ತಲಿನಲ್ಲಿ ಚಕ್ಕಳಮಕ್ಕಲ ಹಾಕಿ
ಕೂತ ದೃಶ್ಯ ಕಾಣುತ್ತದೆ

ಮರು ಬೆಳಗು—

ಕನ್ನಡಿಯಲ್ಲಿ ನಿನ್ನ ನೀನು ದಿಟ್ಟಿಸಿದಾಗ
ಬಡತನ ನಿನಗೆಂದು ಪರಕೀಯ ಅನಿಸುವುದಿಲ್ಲ
ಅದೀಗ ನಿನ್ನನ್ನೇ ಒಡೆಯನನ್ನಾಗಿಸಿಕೊಂಡು
ಹೆಗಲೇರಿ ಕೂತಾಗ ನಿನ್ನ ಕಥೆಯು ಹಾದಿ ತಪ್ಪಿ
ಹೆಂಡತಿಯ ದನಿ ಕರ್ಕಶವಾದಂತೆ ಭಾಸವಾಗುತ್ತದೆ

ಇನ್ನು ನೀನು ನಿನ್ನವರು ಸೊಗದ ಸವಿಯ
ಬದುಕ ಬದುಕಲಾರಿರಿ
ಬರಿಯ ಬದುಕನಷ್ಟೆ 'ಬದುಕ' ಬಲ್ಲಿರಿ

ಲೂಸಿ ಸ್ಮಿತ್

ಅನುವಾದ : ಎಂ. ಆರ್. ಕವಲಿ.

11ನೇ ಪುಟದಿಂದ

ಕೈಗಾರಿಕಾ ಬಿಕ್ಕಟ್ಟಿನಿಂದ ಉದ್ಭವಿಸಿರುವ ತೊಂದರೆಗಳನ್ನು ನಿವಾರಿಸಲು, ಆಧುನೀಕರಣದಿಂದಾಗಿ ಕೆಲಸ ಕಳೆದುಕೊಂಡು ಅಸಂಘಟಿತ ವಲಯಕ್ಕೆ ತಳ್ಳಲ್ಪಡುವುದನ್ನು ನಿಯಂತ್ರಿಸಲು ಉದ್ಯೋಗದ ಹಕ್ಕನ್ನು ಮೂಲಭೂತ ಹಕ್ಕನ್ನಾಗಿಸಲು, ಮತ್ತು ಕಾನೂನುಗಳನ್ನು ಸಮರ್ಪಕ ಜಾರಿಗೊಳಿಸಲು ಮಹಿಳೆಯರು ಟ್ರೇಡ್ ಯೂನಿಯನ್ ಅಥವಾ ತಮ್ಮ ಸಂಸ್ಥೆಯ ಸಂಘಟನೆಗಳಲ್ಲಿ ನಾಮ ಮಾತ್ರಕ್ಕಷ್ಟೇ ಇರದೆ, ನಿರ್ಣಯಗಳನ್ನು ಮಾಡುವಲ್ಲಿಯೂ ಮಹತ್ವದ ಪಾತ್ರವನ್ನು ವಹಿಸಬೇಕಿದೆ. ಈ ಭಾಗವಹಿಸುವಿಕೆಗೆ ತಡೆಯನ್ನೊಡ್ಡುತ್ತಿರುವ ಕೌಟುಂಬಿಕ ವಲಯಗಳಲ್ಲಿ ಅನುಕೂಲಕರವಾದ ವಾತಾವರಣವನ್ನು ಉಂಟುಮಾಡುವಲ್ಲಿ ಒಟ್ಟಾರೆ ಸಾಮಾಜಿಕ ಬದಲಾವಣೆ ತರುವಲ್ಲಿ ಇಂದು ಮಹಿಳೆ ಹಿಂದೆಂದಿಗಿಂತಲೂ ಹೆಚ್ಚು ಒಗ್ಗಟ್ಟಾಗಿ ಹೋರಾಟ ಮಾಡಬೇಕಾಗಿದೆ.

ಕರ್ನಾಟಕ ರಾಜ್ಯ ದುಡಿಯುವ ಮಹಿಳೆಯರ
ಸಮನ್ವಯ ಸಮಿತಿ ಕರಪತ್ರದಿಂದ

---

ಹಚ್ಚ ಹಸುರಿನ ಬಾಳೆ ಎಲೆಯನ್ನು
ಮುಂಜಾವದ ಬಿಸಿಲು
ಹೆಜ್ಜೆ ಹೆಜ್ಜೆಯಾಗಿ ಚುಂಬಿಸುವುದನ್ನು
ಕಂಡಾಗಲೊಮ್ಮೆ
ಕಳಕೊಂಡಿದ್ದೆಲ್ಲವ ಕನಸುಪಂತಾಗುತ್ತದೆ.

ಋತು ಚಕ್ರಕ್ಕೆ ಲಗ್ಗೆ ಇಟ್ಟು
ಪುಟ್ಟ ಹೆಜ್ಜೆಗಳ
ಗೆಜ್ಜೆ ಸದ್ದಿನಿಂದ
ಝೇಂಕರಿಸಿದ ಕಿಶೋರಿ
ಒಮ್ಮೊಮ್ಮೆ ಮೋಡಿ ಹಾಕುತ್ತಾಳೆ
ನಿರಂತರ ಬದುಕಿನ ಕನ್ನಡಿಗೆ
ಮೆರಗು ಹಚ್ಚುತ್ತಾಳೆ.

ಎಚ್. ಎಸ್. ಚಂಪಾವತಿ.

ಹತ್ತು ಹೆಣ್ಣುಗಳ ನಡುವೆ ಚಿನ್ನ ಗೌರಿ,
ಅದರೂ ಸುಬ್ಬನಿಗೆ ಬೇಕು ಡೌರಿ.
ವರುಷದೊಳಗೆ ಬಂಜಲಾಯ್ತು ಅವರ ಬಣ್ಣ
ವರದಕ್ಷಿಣೆ ಕೆಟ್ಟ ಪಿಡುಗು ಅಲ್ಲವೇ ಅಣ್ಣ.

ಮುದ್ದಣ್ಣ ಮೈಲಾರ್.



## ನಿನಗಿದೋ ನಮಸ್ಕಾರ

ನನ್ನೆದೆಯ
ಪಲ್ಲಕ್ಕಿಯ ಮೇಲಿನ
ಮೆರವಣಿಗೆಯಲ್ಲೂ
ನಿನಗೆ ಜೊಲ್ಲು!
ಕಾರಣ ಸ್ಪಷ್ಟ
ಇಕ್ಕೆಲಗಳಲ್ಲಿ
ಲೆಕ್ಕವಿಲ್ಲದಷ್ಟು
'ಕಕ್ಕಸ್ಸು'
ನಿನ್ನ ಕಣ್ಣು ಕುಕ್ಕಿದ್ದು!
ದಕ್ಕಿದವಳಿಗಿಷ್ಟು
ಗುಕ್ಕಿಡದೆ
ಚಕ್ಕನೆ ನೀನು
ಕೆಳನೆಗೆದು
'ಪಕ್ಕಾ' ಗಂಡಸುತನ
ತೋರಿದಾಗಲೇ
ನಾನು ಧಿಕ್ಕಾರ ಹಾಕಿದ್ದು.

ಗೆಳೆಯಾ —
ಆಸೆಗಳ ಪಲ್ಲವಿಸಲಾರದ
ನಿನ್ನ ಇಲ್ಲದಿರುವಿಕೆಯಲ್ಲೂ
ನನಗಿಲ್ಲ ದುಃಖದ ಸೊಲ್ಲು;
ನಾನಾಗಿರುವೆ ಕಗ್ಗಾಡ ಕಲ್ಲು.
ಎಂದಾದರು ಬಂದಾನು
ಕೆತ್ತಿಯಾನು — ಮುತ್ತಿಕ್ಕಿಯಾನು
ಕಲ್ಲ ಪ್ರತಿಮೆಯಾಗಿಸುವ ಧೀರ—
ನನ್ನೆದೆಯ ಸವಾರ
ನಿನಗಿದೋ 'ನಮಸ್ಕಾರ'

ಇಂದಿರಾ ಯುಗಟೆ.

# ಗುಟ್ಟು



ನಿನ್ನೆದೆಯ ರಸದೊರತೆ
ಮುಚ್ಚಿಬಿಡು ಹುಡುಗೀ —
ಬೇಕಾಬಿಟ್ಟಿ ಪೋಲಾಗದಂತೆ.

ಉಕ್ಕುವ ಜೀವಸೆಲೆ
ಗಟ್ಟಿ ಮುಟ್ಟಾಗಿ
ಕಟ್ಟಿಟ್ಟುಕೊ ಒಳಗು
ಕೊಂಚವೂ ಕೆಳಗಿಳಿಯದಂತೆ.

ಹೊರಗೆ —
ಒಂದಷ್ಟು ಮಣ್ಣು
ಇಷ್ಟು ಸುಣ್ಣ
ಕಲಸಿ, ಮೆತ್ತಿಬಿಟ್ಟರಾಯಿತು.

ಬಣ್ಣ ಬೇಗಡೆ
ಹಚ್ಚಿ ಬಿಟ್ಟರಾಯಿತು,

ತಿರುಳ ಸವಿ ಮಾತ್ರ
ಬಿಟ್ಟುಕೊಡಬೇಡ ಹುಡುಗೀ —
ಇಲ್ಲಿಲ್ಲ ಒಂದೂ ಗಂಡು

ಇದ್ದಿದ್ದೆಲ್ಲ
ಹದ್ದು — ಹುಲಿ
ಹಾವು — ಗೂಳಿ ಹಿಂಡು ಹಿಂಸು.

ಭಾಗೀರಥಿ ಹೆಗಡೆ

# "ಮೂಡಲ ಸೀಮೆ ಬ್ಯಾಸಿಗೆ"

ಉತ್ತನೂರು ರಾಜಮ್ಮ ಅವರ ಮೊದಲನೇ ಕವನ ಸಂಕಲನ "ಮೂಡಲ ಸೀಮೆ ಬ್ಯಾಸಿಗೆ". ಈ ಕವನಗಳಲ್ಲಿ ಕಣ್ಣಾಡಿಸಿದಾಗ ಅದು ಬೇಸಿಗೆಯ ಬಿಸಿಲಂತೆ ಚುರುಗುಟ್ಟಿಸದೆ, ಬೇಸಿಗೆಯ ಸಂಜೆಗಳಲ್ಲಿ ಬೀಸುವ ತಂಪು ಗಾಳಿಯಂತೆ ನಮ್ಮನ್ನು ಹಿತವಾಗಿ ತಬ್ಬುತ್ತದೆ. ಮಣ್ಣಿನೊಂದಿಗೆ, ತನ್ನ ಸುತ್ತಣ ಬದುಕಿನ ಕೆರೆ, ಕಾಲುವೆ, ಹಸಿರು, ಚಿಗುರು, ಒಗರಿನೊಂದಿಗೆ ಆತ್ಮೀಯವಾಗಿ ಬೆರೆತುಕೊಂಡ ಮನಸ್ಸೊಂದು ಇಲ್ಲಿ ತನ್ನ ಸಂಭ್ರಮವನ್ನು, ಅಚ್ಚರಿಯನ್ನು, ನೋವನ್ನು ಹಂಚಿಕೊಳ್ಳುತ್ತದೆ.

"ಹೊಂಗೆ ಹುಣಿಸೆಯ ಟೊಂಗೆ
ಚಿಗುರ ಮುಗುಳನು ಚೆಲ್ಲಿ
ಇಗುರ ಗಾಳಿಯ ತೀಡಿ
ಯುಗಾದಿಯ ಸಡಗರವ
ಬಯಲೆಲ್ಲಾ ಸಾರಿದೆ."

"ಅವರೆ ಅಲಸಂದಿ ಸಾಲಲ್ಲಿ
ಉಬ್ಬಿ ಬಾಗಿದ ಜೋಳ
ಹುಚ್ಚೆಳ್ಳು ಹೂ ಕಂಪು
ಸೂಸಿ ಕರೆದಂತೆ"

ಹೀಗೆ ಗ್ರಾಮೀಣ ಬದುಕಿನ ತನ್ನದೇ ಆದ ಸೊಬಗ್ಗು ಸೌಂದರ್ಯಕ್ಕೆ ಅಗಲಿಕೊಳ್ಳುವ ಮನಸ್ಸು, ಅದಕ್ಕೆ ಕುತ್ತುತರುವ ವ್ಯಾಪಾರೀ ವ್ಯವಸ್ಥೆಯನ್ನು ಮತ್ತು ಅದರಿಂದ ಉಂಟಾಗುವ ದುರಂತವನ್ನು ತೀವ್ರವಾಗಿ ಖಂಡಿಸುತ್ತದೆ. ರಾಜಮ್ಮ ಅವರ "ಭೂ ತಾಯಿ ಬಂಜೆಯಾದಳು" ಕವನ ಈ ನಿಲುವನ್ನು ಅತ್ಯಂತ ಸಫಲವಾಗಿ, ಮಾರ್ಮಿಕವಾಗಿ ವ್ಯಕ್ತಪಡಿಸಿದೆ. ಭೂತಾಯಿಯನ್ನು ಬಂಜೆಯಾಗಿಸುವ ನೀಲಗಿರಿಯನ್ನು ಕುರಿತದ್ದು ಈ ಕವನ:

"ನೀಲಗಿರಿ ಮರದ
ಸುಳಿ ತಗುಲಿ
ಮೊಲೆ ತೊಟ್ಟು ಕರಟಾಯಿತು
ಸೇಪು ಇಂಗಿಹೋಯಿತು"

"ಮುಂಗೈ ನೆಕ್ಕಿದ ಬಸವ
ಮೂಳೆ ಚಕ್ಕಳವಾಗಿ
ಕಸಾಯಿ ಸರತಿಯಲಿ
ಕೋಡು ವಾಲಿಸಿಹು"

ಮುಂಗೈ ನೆಕ್ಕಿದ ಮೂಕ ಬಸವ ಮಾನವನ ಸ್ವಾರ್ಥಕ್ಕೆ ಬಲಿಯಾಗುವ ಹೃದಯ ಮಿಡಿವ ಸನ್ನಿವೇಶ ಇದಾಗಿದೆ.

ಹೀಗೆ ಬೇಸಾಯದ ಮತ್ತು ಹಳ್ಳಿ ಬದುಕಿನ ಕೊನೆಯಿಲ್ಲದ "ಗೆಯ್ಮೆ" ಯ ಹಿನ್ನೆಲೆಯಿಂದ ಬಂದ ರಾಜಮ್ಮನವರ ಕಾವ್ಯ ಸ್ತ್ರೀ ಶೋಷಣೆ, ಮತ್ತು ಜಾತಿ ಜೇರುಂಡೆಗಳ ಕರಾಮತ್ತನ್ನು ಕೂಡ ಬಯಲಿಗೆಳೆಯುವುದರಲ್ಲಿ ಹಿಂಜರಿದಿಲ್ಲ. ಉದಾ: ಈ ಶತಮಾನದಲ್ಲೂ "ಸತಿ" ಯಾದ ರೂಪಾ ಕನ್ವರಳ ದುರಂತಕ್ಕೆ ಇವರು ಪ್ರತಿಕ್ರಿಯಿಸುತ್ತಾ

"ಉರಿಯ ಕೆನ್ನಾಲಿಗೆ
ಅವುಚಿದ
ನಿನ್ನ ಎಳೆದೇಹ
ಚಿತೆಯಿಂದ ಹೊರ
ಪುಟಿದಿರಬೇಕು
ಬದುಕುಳಿವ ಆಸೆಯಿಂದ"

ಎಂದು ಬದುಕುಳಿಯಲು ಒದ್ದಾಡಿರಬಹುದಾದ ಒಂದು ಮುಗ್ಧ ಜೀವದ ಬವಣೆಯನ್ನು ಹೇಳುತ್ತಾ ಅದಕ್ಕೆ ಕಾರಣಕರ್ತರಾದ ಗಂಡು ರಕ್ಕಸರನ್ನು

"ಮಾಸತಿಯ ಇತಿಹಾಸ
ಛಾಪಿಸಲು ಕುಂತ
ಮಹನೀಯ ಗಂಡುಗಳು
ಮನುಕುಲದ ಅಧಿ(ವಿ)ಕೃತ
ವಕ್ತಾರರು ಅವರಲ್ಲವೆ?"

ಎಂದು ತೀವ್ರವಾಗಿ ಖಂಡಿಸುತ್ತಾರೆ. ಸಮಾಜದ ವಿಕೃತಿಗೆ ಬಲಿಯಾದ ಹೆಣ್ಣೊಬ್ಬಳ ದುರಂತ ಎಲ್ಲ ಹೆಣ್ಣುಗಳ ದುರಂತವೆಂದು ಭಾವಿಸುವ ಅವರ ಧೋರಣೆ ಗೌರವಿಸುವಂತದ್ದಾಗಿದೆ. ಆದರೆ ಇದೇ ಕವಯಿತ್ರಿ ತಮ್ಮ "ಒಂದು ಸವಾಲು" ಕವನದಲ್ಲಿ "ಲಿಪ್‌ಸ್ಟಿಕ್" ಬಳಿದ ಅವಕುಂಠನವತಿಯರು ಎಂದು ನಗರದ ಮಹಿಳೆಯರನ್ನು (ಸೊಫಿಸ್ಟಿಕೇಟೆಡ್) ಎನ್ನುವಂತೆ ಟೀಕಿಸುತ್ತಾರೆ:

"ಅಬ್ಬರ ಆಕ್ರೋಶ
ಉಬುಕಿ ಹುಳುಕುತ್ತ
ಆಕಾಶವಾಣಿಯಲಿ ಗುಡುಗಿ
ದೂರದರ್ಶನದಲ್ಲಿ ಒದರಿ
ಬಿಸಾಕುವ ಲಿಪ್‌ಸ್ಟಿಕ್ ತುಟಿಗಳ
ಅವಕುಂಟನವತಿಯರೇ"

ಎಂದು ಹಂಗಿಸುತ್ತಾ,

"ಚಂದ್ರಗುತ್ತಿಯ ಅರೆಯ
ಬೆತ್ತಲೆ ಹೀರುವ ನೆತ್ತಿಗಳಿಗೆ
ಕಾವಲುಗಾತಿಯರಾಗಿ
ನಿಲ್ಲ ಬಲ್ಲಿರಾ?"

ಎಂದು ನಗರದ ಬೆಡಗುಗಾತಿಯರಿಗೆ ಸವಾಲು ಹಾಕುತ್ತಾ, ಅವರ ಹೋರಾಟ ಇನ್ನೂ ಆಳವಾದದ್ದು ಮತ್ತು ತೀವ್ರ ಸ್ವರೂಪವಾಗಬೇಕು ಎಂದು ಸೂಚಿಸುತ್ತಾರೆ. ಹಾಗೇ "ಫಣಂದಾರ್ಕೆ" ಎನ್ನುವ ಕವನದಲ್ಲಿ ಮಠದ ಸ್ವಾಮಿಯ ವಿರುದ್ಧ ಪ್ರತಿಭಟಿಸಲು ಪರಿಶೆ ಹೊರಟ ನಾರಿಯರನ್ನು ಎಂಬತ್ತರ ಅಜ್ಜಿ ತಮ್ಮ ಕಾಲದ ಸಾಧನೆಯನ್ನು ಹೇಳುತ್ತಾ ನಿಮ್ಮದೇನು ಮಹಾ ಎಂದು ಹಂಗಿಸುವ ಸಂದರ್ಭವಿದೆ. ಇಲ್ಲಿ ಕವಯಿತ್ರಿಯವರ ಧೋರಣೆ ಪ್ರಶ್ನಾರ್ಹವಾಗಿದೆ. ಕವಯಿತ್ರಿ ಇಲ್ಲಿ ತಮ್ಮನ್ನೇ ಮಹಿಳೆಯರಿಂದ ಪ್ರತ್ಯೇಕಿಸಿಕೊಂಡು ನೋಡುವ ದೃಷ್ಟಿ ಆಶ್ಚರ್ಯಕರವಾಗಿದೆ.

ಹೀಗೆ ಕೆಲವೊಂದು ಸುಶಿಕ್ಷಿತ ಮಹಿಳೆಯರು ಪ್ರತಿಭಟಿಸುವ ರೀತಿಯನ್ನು ಟೀಕಿಸುವ ಕವಯಿತ್ರಿ ಒಂದು ಅಂಶವನ್ನು ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಅತ್ಯಂತ ಮುಂದುವರಿದ ರಾಷ್ಟ್ರಗಳಲ್ಲಿ ಕೂಡ ಇವತ್ತಿಗೂ ಮಹಿಳೆ ಅತ್ಯಾಚಾರಕ್ಕೊಳಗಾಗುತ್ತಿರುವಾಗ, ಹೆಣ್ಣು ಶಿಸುಗಳು ಭ್ರೂಣಾವಸ್ಥೆಯಲ್ಲೇ ಸಾವನ್ನಪ್ಪುತ್ತಿರುವಾಗ, ವಿದ್ಯಾವಂತ ಮಹಿಳೆಯರೆನಿಸಿಕೊಂಡವರೂ ಅನಿವಾರ್ಯವಾಗಿ ಕೆಲವೊಮ್ಮೆ ಬಹುಪತ್ನಿತ್ವವನ್ನೂ ಹಲ್ಲುಕಚ್ಚಿ ಸಹಿಸಿಕೊಂಡು ಬೇಯುತ್ತಿರುವಾಗ ಇಲ್ಲಿ ಹೋರಾಟ ಮುಖ್ಯವಾಗುತ್ತದೆಯೇ ಹೊರತು ನಗರದ ಮಹಿಳೆಯರು, ಹಳ್ಳಿಯ ಹೆಣ್ಣುಗಳು ಎನ್ನುವ ತಾರತಮ್ಯ ಅಗತ್ಯವಿಲ್ಲ. ಸ್ತ್ರೀಪರವಾದ ಹೋರಾಟ ಗ್ರಾಮೀಣ ಮಹಿಳೆಯ ನೋವುಗಳನ್ನು ಒಳಗೊಂಡು ಮುಂದುವರೆಯಬೇಕೆಂಬ ರಾಜಮ್ಮ ಅವರ ನಿಲುವು ಕಾಳಜಿಪೂರ್ವಕವಾದುದೇನೋ ಸರಿ. ಹಾಗೇ ಹೆಣ್ಣು ಯಾವುದೇ ಹಿನ್ನೆಲೆಯಿಂದ ಬಂದಿದ್ದರೂ ಶೋಷಿತಳಾಗಿರುವ ಕಾರಣಕ್ಕೆ ಇಲ್ಲಿ ಹೋರಾಟ ಮುಖ್ಯವಾಗುತ್ತದೆಯೇ ಹೊರತು ಹಳ್ಳಿಯ ಹೆಂಗಸರು ನಗರದ ಹೆಂಗಸರು ಕೋಳಿಕಾಳಗಕ್ಕಿಳಿಯುವ ಅಗತ್ಯವಿಲ್ಲ.

"ಮಹಿಳಾ ಸಾಹಿತ್ಯ ಫಲವತ್ತು" ಎನ್ನುವ ಕವನವನ್ನು ಈ ದೃಷ್ಟಿಯಿಂದ ವಿವೇಚಿಸಬಹುದು. ಮಹಿಳಾಸಾಹಿತ್ಯ ಇಲ್ಲಿವರೆಗೆ ಹೆಚ್ಚು ಶಿಷ್ಟವಾಗಿ ಮಡಿವಂತಿಕೆಯಿಂದ ಕೂಡಿದೆ. ಅದು ನೆಲಕ್ಕಾಗಿ ಜೀವತೆತ್ತ, ಗೆಯ್ಮೆಯನ್ನೆ ಬದುಕು ಮಾಡಿಕೊಂಡ "ವಡ್ಡರ ಗಂಗಜ್ಜಿ" "ಮಾದರ ನಿಂಗಜ್ಜಿ" ಮುಂತಾದವರ ಬದುಕನ್ನು ಬಿಂಬಿಸಬೇಕು ಎಂಬ ಅವರ ನಿಲುವು ಸರಿಯಾದರೂ ಮಹಿಳಾ ಸಾಹಿತ್ಯ ಇದುವರೆಗೆ ಇಂಗು, ತೆಂಗು, ಕೋಸಂಬ್ರಿ, ಹಯಗ್ರೀವ, ಹುಗ್ಗಿ, ಪುಳಿಚಾರು, ಪುಳಿಯೋಗರೆಯ ತಿರುಗಣಿಯಲ್ಲಿ ಸಿಕ್ಕಿದೆ ಎನ್ನುವ ಅವರ ಅಭಿಪ್ರಾಯ ದುಡುಕಿನದಾಗಿದೆ. ಉದಾ: ಶಶಿಕಲಾ ವಸ್ತ್ರದ ಅವರ "ಗುಬ್ಬಿಮನಿ" ಯಾಗಲಿ, ಸ. ಉಷಾರ "ತೊಗಲು ಬೊಂಬೆಯ ಆತ್ಮಕಥೆ" ಆಗಲಿ, ಪ್ರತಿಭಾರವರ "ನಾವು ಹುಡುಗಿಯರೇ ಹೀಗೆ" ಆಗಲಿ ಅಕ್ಷರಕ್ಷರದಲ್ಲಿ ಕಾವ್ಯ ಪುಟಿಯುವ ವೈದೇಹಿಯವರ ಗದ್ಯವಾಗಲಿ, ಪದ್ಯವಾಗಲಿ, ಅನುಪಮಾ ಅವರ ದೃಢತೆಯಾಗಲೀ, ವಿಜಯಾ ದಬ್ಬೆಯವರ ವಸ್ತುನಿಷ್ಠ ದೃಷ್ಟಿಯಾಗಲೀ, ನಿಲುವಾಗಲೀ ಕೇವಲ ಪುಳಿಚಾರು, ಪುಳಿಯೋಗರೆಯ ಸುತ್ತ ಗಿರಕಿ ಹೊಡೆಯುತ್ತಿಲ್ಲ ಎನ್ನುವುದನ್ನು ಇಲ್ಲಿ ನೆನಪಿಸಬೇಕಾಗಿದೆ.

ಇಷ್ಟರ ಹೊರತಾಗಿ ರಾಜಮ್ಮ ತಮ್ಮ ಕಾವ್ಯ ಲವಲವಿಕೆ ಮತ್ತು ಜೀವಂತಿಕೆಯಿಂದ ಗಮನ ಸೆಳೆಯುತ್ತಾರೆ. ಅವರ ಮುಗ್ಧತೆ ಮತ್ತು ಕಾವ್ಯ ಜೀವನದಂತೆ ಸಮೃದ್ಧವಾಗಬೇಕೆಂಬ ಅದಮ್ಯ ಹಂಬಲ ಮೆಚ್ಚಿಕೊಳ್ಳುವಂತಹುದು. ತಮ್ಮ ಕಾವ್ಯ ಪೇಗಿರ

ಬೇಕು ಮತ್ತು ಅದು ಹೇಗೆ ಬದುಕನ್ನು ಅಪ್ಪಿಕೊಂಡಿದೆ ಎಂದು ಅವರು ಬರೆಯುವ ರೀತಿ ಹೀಗಿದೆ:

"ಕರು ಇಟ್ಟ
ನುಣ್ಣನೆಯ ಸಗಣಿ
ಕಲಸಿ ಸಾರಿಸಿದ ಹೊಸಲು

ಸುಣ್ಣ ಬಳಿದ
ಬೆಳ್ಳನೆಯ ಗೋಡೆ
ಅಂಚುಗಳಲ್ಲಿ
ನೆಲೆನಿಂತ ತೊಲೆಗಂಬ

ಹಾಲುಕ್ಕಿ ನಿಂತ
ಒಲೆದಿಂಡುಗಳ
ಎಳೆಯಾಗಿ ಬಳಸಿ
ಬಳ್ಳಿಯಾದ ರಂಗವಲಿ"

ತಮ್ಮ ಕಾವ್ಯ "ಕರು ಇಟ್ಟ ನುಣ್ಣನೆಯ ಸಗಣಿಯಿಂದ ಕಲಸಿ ಸಾರಿಸಿದ ಹೊಸಿಲಿನಂತಿರಬೇಕು" ಎಂದು ಹೇಳುವ ಅವರ ಗ್ರಾಮ್ಯ ಬದುಕಿನ ಪ್ರೀತಿ ಅದಮ್ಯವಾದುದು. ಇಂಥ ಒಂದು ಹೋಲಿಕೆ, ಪ್ರತಿಮೆ ಕಾವ್ಯದಲ್ಲಿ ಅಪರೂಪವೆಂದೇ ಹೇಳಬೇಕು. ತಮ್ಮ ಕವನ ಒಲೆದಿಂಡುಗಳ ಮೇಲೆ ಉಕ್ಕಿ ನಿಂತ ಹಾಲಿನಂತೆ ಸಮೃದ್ಧವಾಗಿ ಒಲೆದಿಂಡುಗಳನ್ನು ಬಳಸಿ ಬಳ್ಳಿಯಾದ ರಂಗವಲ್ಲಿಯಂತೆ ಸೂಕ್ಷ್ಮವಾಗಿರಲಿ ಎಂದು ಸೂಚಿಸುವ ಈ ಪ್ರತಿಮೆ ಮೋಹಕವಾಗಿದೆ. ಮುನ್ನುಡಿಯಲ್ಲಿ ಲಂಶರು ಹೇಳುವಂತೆ ಕುಮಾರ ವ್ಯಾಸನ ಕುಶಲತೆ ಇಲ್ಲಿ ಹಣಕಿದೆ. ಆದರೆ ಬಸವಣ್ಣನವರ ಸಂಘರ್ಷ, ಜೀವನದೃಷ್ಟಿ ಇನ್ನೂ ಸ್ಪಷ್ಟವಾಗಿ ಒಡಮೂಡಬೇಕಾಗಿದೆ. ಒಟ್ಟಿನಲ್ಲಿ ರಾಜಮ್ಮ ವಿ. ಆರ್. ಪ್ರತಿಭಾರ ನಂತರ ಗಮನಸೆಳೆವ ಮತ್ತೊಬ್ಬ ಭರವಸೆಯ ಕವಯಿತ್ರಿ.

ಬಿ. ಎಸ್. ಮಧುಮತಿ



## ಬಂಧಿಯಾದಾಗ?

ಪ್ರೀತಿಯೆ ನೀನೆನ್ನ ಪ್ರೀತಿಯೆ
ನಿನ್ನ ನುಡಿಯೆ ನನ್ನ ನುಡಿ
ನಿನ್ನ ನಗುವೆ ಚಿನ್ನದ ಗುಡಿ

ನೀ ಹೇಳುವುದೆಲ್ಲ ಚೆನ್ನು
ನೀ ಮಾಡುವುದೆಲ್ಲ ಸಲ್ಲು
ನನ್ನ ಧ್ಯೇಯವೆಲ್ಲ ನಿನ್ನ ಗೆಲುವಿಗಾಗಿ

ನನ್ನ ಕಾಯಕವೇ ನಿನ್ನ ಒಳಿತಿಗಾಗಿ
ನೀ ನನ್ನ ಪಾದದ ಧೂಳಾದಾಗ
ನೀ ನಾಲ್ಕು ಗೋಡೆಗಳ ಬಂದಿಯಾದಾಗ
ನಿತ್ಯ ಸತ್ಯ
ಬದುಕು ಚಿರನೂತನ?

ವೇದ,

# ನೋವು

ಪ್ರತಿಯೊಬ್ಬರ ಜೀವನದಲ್ಲಿಯೂ ನೋವು ನಲಿವುಗಳು ತೀರ ಸಹಜವೂ ಸಾಮಾನ್ಯವೂ ಆದ ಸಂಗತಿಗಳು. ಹಗಲು ರಾತ್ರಿಗಳಂತೆ ಇವು ಒಂದನ್ನೊಂದು ಹಿಂಬಾಲಿಸುತ್ತವೆ. ಸವಿಯಲು ಮಧುರವಾದ ನಲಿವು ಎಲ್ಲರಿಗೂ ಆಪ್ಯಾಯಮಾನ. ವಿರುದ್ಧ ಅನುಭವ ನೀಡುವ ನೋವನ್ನು ಇಚ್ಛಿಸುವವರು ಮಾತ್ರ ಯಾರೂ ಇಲ್ಲ. ಆದರೂ ನೋವು ಯಾರನ್ನೂ ಹಿಡಿಯದೆ ಬಿಡುವುದಿಲ್ಲ. ಇಂಥ ಅನಿವಾರ್ಯವಾದ ನೋವು ನಮ್ಮ ಬದುಕಿನಲ್ಲಿ ಮುಖಾಮುಖಿಯಾದಾಗಿನ ನಮ್ಮ ಪ್ರತಿಕ್ರಿಯೆ, ನಮ್ಮ ಮುಂದಿನ ಹೆಜ್ಜೆಯನ್ನು ನಿರ್ಣಯಿಸುವ ಮುಖ್ಯ ಘಟಕವಾಗುತ್ತದೆ, ನಮ್ಮ ಬಾಳ್ವೆ ನಡೆಯುವ ತಿರುವನ್ನು ನಿರ್ಧರಿಸುತ್ತದೆ. ನೋವು ಎದುರಾದಾಗ ನಾವು ತೀರ ಸಾಮಾನ್ಯರಾದಲ್ಲಿ ಪಲಾಯನ ವಾದವನ್ನು ಪುರಸ್ಕರಿಸುತ್ತೇವೆ ಅಥವಾ ನಿಷ್ಕ್ರಿಯರಾಗುತ್ತೇವೆ. ಸ್ವಲ್ಪ ಹೆಚ್ಚಿನ ಸತ್ವವುಳ್ಳವರಾದಲ್ಲಿ ಛಲದಿಂದ ಹೋರಾಟವನ್ನು ಪ್ರಾರಂಭಿಸುತ್ತೇವೆ. ಆದರೆ ಗುಣಾತ್ಮಕ ಪರಿಣಾಮದ ದೃಷ್ಟಿಯಿಂದ ಅತ್ಯಂತ ಶ್ರೇಷ್ಠವಾದ ರೀತಿಯೆಂದರೆ ನೋವನ್ನು ಆರೋಗ್ಯಕರವಾದ ಬೆಳವಣಿಗೆಯ ಮಾಧ್ಯಮವಾಗಿ ಸ್ವೀಕರಿಸುವುದು.

ಒಂದು ಶಿಲೆ ಪೆಟ್ಟು ತಿಂದಾಗ ರೂಪುಗೊಳ್ಳುವ ವಿಗ್ರಹ ಭಯಂಕರವಾದ ಆಕಾರವನ್ನು ತಾಳಬಹುದು ಅಥವಾ ಮಂದಹಾಸವನ್ನು ಬೀರುವ ಸುಂದರ ರೂಪವನ್ನು ಪಡೆಯಬಹುದು. ಅದೇ ರೀತಿ ನೋವಿಗೊಳಗಾದ ವ್ಯಕ್ತಿ ಅಂತಿಮವಾಗಿ ಅಂತರ್ಯದಲ್ಲಿ ಮೃದು ಮನಸ್ಸಿನ ಅಂತಃಕರುಣಿಯಾಗಬಹುದು ಅಥವಾ ಒರಟು ಸ್ವಭಾವದ ಕ್ರೂರಿಯಾಗಬಹುದು. ನಮ್ಮ ನೋವು ನಮ್ಮನ್ನು ಮಾಗಿಸಬೇಕು ಎಂಬುದು ನಮ್ಮ ಆಶಯವಾದಲ್ಲಿ ನೋವಿನ ಅವಧಿಯಲ್ಲಿಯೂ ನಾವು ಸೇಡಿನ ಜ್ವಾಲೆಯಿಂದ ದೂರವಿರಬೇಕು. ಅದರ ಶಾಖದಿಂದ ದ್ವೇಷ, ಸೇಡುಗಳ ಕಿಟ್ಟ ನಮಗೆ ತಟ್ಟಬಾರದು ಎಂಬುದು ನಾವು ಅಗತ್ಯವಾಗಿ ವಹಿಸಬೇಕಾದ ಎಚ್ಚರಿಕೆ. ಏಕೆಂದರೆ ಸೇಡಿನಷ್ಟು ನಿರರ್ಥಕವಾದದ್ದು ಬೇರೆ ಯಾವುದೂ ಇಲ್ಲ.

ಅಚೇತನ ವಸ್ತುವಿಗೆ ನೋವಿನ ಅರಿವಾಗುವುದಿಲ್ಲ. ನಿಜದಲ್ಲಿ ನೋವು ನಮ್ಮ ಜೀವಂತಿಕೆಯ ಸಂಕೇತ, ಸ್ಪಂದಿಸಬಲ್ಲ ಶಕ್ತಿ. ಆದ್ದರಿಂದಲೇ ನೋವು ಜೀವಪೋಷಕವೂ ಹೌದು. ನೋವು ನಮ್ಮನ್ನು ಸಂಸ್ಕರಿಸುತ್ತದೆ. ನೋವಿನ ಕುಲುಮೆಯಲ್ಲಿ ಹಾದು ಬಂದಾಗ ನಮ್ಮ ಕೊರತೆಗಳು ಕಳಚುತ್ತವೆ, ಮಿತಿಗಳು ಮಾಯವಾಗುತ್ತವೆ, ನ್ಯೂನತೆಗಳು ನಶಿಸುತ್ತವೆ. ಫಲವಾಗಿ ನಮ್ಮ ವ್ಯಕ್ತಿತ್ವ ಪುಟಗೊಳ್ಳುತ್ತದೆ.

ನೋವಿನ ಫಲವಾದ ಆಲೋಚನೆ ಕೇವಲ ಆತ್ಮರತವೂ ಆಗಿಬಿಡಬಹುದು. ತನ್ನಲ್ಲಿ ತಾನು ಮರುಕಗೊಳ್ಳುವ ಅಪ್ರಬುದ್ಧತೆ ಕಾಣಿಸಿಕೊಳ್ಳಬಹುದು. ಇಂಥ ಪ್ರವೃತ್ತಿಯನ್ನು ಆರಂಭದಿಂದಲೇ ಚಿವುಟದಿದ್ದರೆ ವ್ಯಕ್ತಿತ್ವವೇ ಟೊಳ್ಳಾಗುವ ಅಪಾಯ ಸಂಭವಿಸುತ್ತದೆ. ಆದರ ಬದಲು ನಮ್ಮ ನೋವಿನ ಅನುಭವದಿಂದ ಇತರರ ನೋವನ್ನು ಅರಿಯುವ ಹಾಗೂ ದೂರ ಮಾಡಲು ಯತ್ನಿಸುವ ಶಕ್ತಿಯನ್ನು ಬೆಳೆಸಿಕೊಳ್ಳುವುದು ಅಪೇಕ್ಷಣೀಯ. ತನ್ನಂತೆ ಇತರರು ಎಂಬ ಗ್ರಹಿಕೆ ಇಲ್ಲಿ ಮುಖ್ಯ.

ನೋವಿನ ಕಾರಣಗಳು ಅನೇಕ. ನಂಬಿದವರ ದ್ರೋಹ, ಆತ್ಮೀಯರ ಅಗಲಿಕೆ, ಬಯಸಿದ್ದು ಕೈಗೂಡದಿರುವುದು ಮೊದಲಾಗಿ ಇದರ ಪಟ್ಟಿ ಬೆಳೆಯುತ್ತದೆ. ದೈಹಿಕವಾದ ನೋವಿಗಿಂತ ಮಾನಸಿಕವಾದ ನೋವು ಹೆಚ್ಚಿನ ತೀವ್ರತೆಯನ್ನು ಪಡೆದಿರುವಂಥದು. ನೋವು ಸ್ವಯಂಕೃತಾಪರಾಧದ ಫಲವಾಗಿರಬಹುದು ಅಥವಾ ಬೇರೆ ಯಾರದೋ ಮೂರ್ಖತದಿಂದ, ನಮಗೆ ಸಂಬಂಧಿಸದ ಕಡೆಯಿಂದ ನಮ್ಮ ಪಾಲಿಗೆ ಬಂದಿರಬಹುದು. ನಿರ್ಲಿಪ್ತತೆಯಿಂದ ಅರ್ಥೈಸಿದಲ್ಲಿ ಮಾತ್ರ ಮಾರಕ ಪರಿಸ್ಥಿತಿಯಲ್ಲಿಯೂ ನೋವು ಮದ್ದಾಗಿ ಪರಿಣಮಿಸುತ್ತದೆ, ತಿಳಿವಿನ ಆಳವನ್ನು ಹೆಚ್ಚಿಸುತ್ತದೆ, ಬದುಕಿಗೆ ಹೊಸ ಭಾಷ್ಯವನ್ನು ಬರೆಯುವ ಅರ್ಥಪೂರ್ಣ ಶಕ್ತಿಯಾಗುತ್ತದೆ.

22ನೇ ಪುಟ ನೋಡಿ

# "ಅವ್ವನ ಸೀರೆ"

ನಿರ್ಮಲಾ ಅನೆವಟ್ಟಿ.

ಒಂದು ದಿನ ನನ್ನವ್ವನ
ನೂಲೆಳೆಯ ಸೀರೆ —
ಮುಳ್ಳು ಬೇಲಿಗೆ ಸಿಕ್ಕು ಹರಿದು ಹೋಯಿತು

ಬಿಡಿಸಿ ಕೊಳ್ಳುವ ಜಾಣ್ಮೆ
ಆಕೆಗಿರದಿದ್ದರೂ —
ಹರಿದರೂ ; ಹೊಲೆದು
ತೊಡುವ ತಾಳ್ಮೆ ಆಕೆಗಿತ್ತು

ಒಂದು ದಿನ ನನ್ನವ್ವ —
ಹರಿದ ಸೀರೆ ಹೊಲಿಯುತ್ತಾ ಇದ್ದಳು
ನಾನು ಕೇಳಿದೆ :

" ಅವ್ವಾ......ನಿನ್ನ ಸೀರೆ ಬೇಲಿಗೆ ಸಿಕ್ಕ
ಹರಿದೈತೆ......! ಯಾಕೆ......?
ಬೇಲಿಯನ್ನೇ ಕಿತ್ತೆಸೆದು ಬಿಡು......"
ಅವ್ವ ಅಂದಳು :
" ಹುಚ್ಚಿ......, ಅದ್ಹೇಗೆ ಸಾಧ್ಯ......?"
? ? ?

ಸಾಧ್ಯಾಸಾಧ್ಯತೆಗಳ ಬಗ್ಗೆ
ಮನೆ ಜೋಡಿಸುತ್ತಾ ಕೂತೆ
ಮಣಿಗಳು ಉರುಳುರುಳಿ ಹೋಗುತ್ತಿದ್ದವು.
ಚದುರಿ; ಜಾರುತ್ತಿದ್ದವು

ಮುಂದೆ ಯೋಚಿಸದ ಹಾಗೆ
ಅವ್ವನೇ......ೀ......, ನನಗೊಂದು
ಕೆಲಸ ಕೊಟ್ಟಳು :
" ಮಗಳೇ...... ದಾರ ಮುಗಿದು ಹೋಯಿತು
ಪೋಣಿಸಿ ಕೊಡು......"

ಆಕೆಯ ಮಾತಿನಂತೆ; ಸೂಜಿಯ ಕಣ್ಣಿಗೆ
ದಾರ ಹಾಕಿಕೊಟ್ಟೆ
ಅಷ್ಟೆ :

ಅವ್ವ ಸರಸರನೆ ಹೊಲೆಯುತ್ತಾ
ಹೊಲೆದಳು, ಹರಕು ಮುಚ್ಚುವ ಹಾಗೆ

ಹೊಲಿದದ್ದು ; ಕಾಣದ ಹಾಗೆ
ನಾನು ನೋಡುತ್ತಲೇ ಇದ್ದೆ :

ಹೊಲೆಯುತ್ತಾ, ಹರಕು ಮುಚ್ಚುತ್ತಾ
ಒಂದು ದಿನ ನನ್ನವ್ವನ,
ಕಣ್ಣುಗಳು ಮಂಜಾಯಿತು
ಮುಂದೊಂದು ದಿನ —
ಕುರುಡಾಯಿತು

ನನ್ನನ್ನು ಕರೆದು ಹೇಳಿದಳು:
"ಮಗಳೆ......, ನೀನೂ ಹೊಲೆಯುವುದನ್ನು
ಕಲಿತುಕೋ......
ನಾನಿನ್ನು ಹೊಲೆಯಲಾರೆ —
ಹರಕು ಮುಚ್ಚಲಾರೆ......"
ನಾನು ನಕ್ಕೆ :
"ಹೋಗವ್ವ ......, ನಾನೇಕೆ ಹೊಲೆಯಬೇಕು?
ಹರಿದ ಬಟ್ಟೆ ನಾನೇಕೆ ತೊಡಬೇಕು......?
ಬೇಕಾದರೆ ಹೊಸತು ತಂದೇನು!
ನಿನಗೊಂದು – ನನಗೊಂದು!"
ಅವ್ವನ ಕುರುಡು ಕಣ್ಣುಗಳು —
ನಕ್ಕವು!

ಒಮ್ಮೆಲೆ ಬೀದಿಗಿಳಿದೆ
ಕಣ್ಣ ಮುಂದೆ 'ಅವ್ವ' ಇದ್ದಳು
ಮನದ ತುಂಬಾ ಆಕೆಯ ಕುರುಡು ಕಣ್ಗಳು
ಮುಚ್ಚಿ ತೆರೆಯುತ್ತಿದ್ದವು
ಒಂದೇ ಆಸರಿಕೆಯಲ್ಲಿ,
ಸೀರೆ ಅಂಗಡಿಯ ಮುಂದೆ ಬಂದು ನಿಂತೆ
ಜಪ್ಪಾಗಿ ನಿಂತೇ ಇದ್ದೆ
"ಏನು ಬೇಕೆಂದು......? ಕೇಳಿದಾತನನ್ನೇ
ದುರುಗುಟ್ಟಿ ನೋಡುತ್ತಾ —
ಬಟ್ಟೆ ಕೇಳುವುದನ್ನೇ ಮರೆತು ಬಿಟ್ಟೆ
"ಅವ್ವನ ಕೊಡಿರಿ......,
ನನ್ನವ್ವನನ್ನು ಕೊಡಿರಿ......"
ಕೂಗುತ್ತಾ ನಿಂತುಬಿಟ್ಟೆ
ಕೂಡಿದ್ದ ಗುಂಪಿನಲ್ಲಿ ನಗೆಗೀಡಾದೆ
ಪೆದ್ದಿಯಂತೆ, ಆದರೂ
ನನ್ನವ್ವನನ್ನು ಕೊಡಿರೆಂದು ಕೇಳುತ್ತಲೇ ಇದ್ದೆ
ನನ್ನ ಮನದ ತುಂಬಾ —
ಅವ್ವನ ಕುರುಡು ಕಣ್ಗಳು
ಮುಚ್ಚಿ, ತೆರೆಯುತ್ತಿದ್ದವು.
ತೆರೆದು ಮುಚ್ಚುತ್ತಿದ್ದವು.

# ಕೌಮುದಿ ಮುನ್‌ಷಿ

ಇತ್ತೀಚಿನ ವರ್ಷಗಳಲ್ಲಿ ಜನಪದ ಕಲೆ, ಸಂಪ್ರದಾಯ ಬದ್ಧ ಕಲೆ, ಸಮೂಹ ಸಂಗೀತ, ಈ ರೀತಿಯ ಕಲಾ ವಿಭಜನೆಯ ಮಾತುಗಳನ್ನು ನಾವು ಕೇಳಿದಾಗ ನಮಗಷ್ಟು ಅಚ್ಚರಿ ಎನಿಸುವುದಿಲ್ಲ. ಭಾರತದಲ್ಲಂತೂ ಸಂಪ್ರದಾಯ ಬದ್ಧ ಸಂಗೀತ ಸುಶ್ರಾವ್ಯವಾಗಿದ್ದರೂ ಕೆಲವಾರು ಕಿವಿಗಳಿಗೆ ಮಾತ್ರ ಸೀಮಿತ. ಆಸಕ್ತಿ ಇದ್ದರೂ ಸಂಗೀತ ರೂಢಿಸಿಕೊಳ್ಳುವ ಅವಕಾಶಗಳು ಕಡಿಮೆ.

ಸಂಗೀತ ಎಂದೊಡನೆ ಕರ್ನಾಟಕಿಯೇ ಆಗಿರಲಿ, ಹಿಂದೂಸ್ಥಾನಿಯೇ ಇರಲಿ, ಹೆಣ್ಣಿಗದು ಭೂಷಣ ಎಂಬ ಚೌಕಟ್ಟಿನ ಮಾತು ಕೇಳಿ ಬರುವುದು ಸಹಜ. ಕಲಿತ ಮೇಲಂತೂ ಅದನ್ನು ವ್ಯಕ್ತಿಗಳ, ಸಂಸಾರದ ಪರಿಧಿಯೊಳಗೆ ಕಟ್ಟಿಹಾಕುವ, ಕಾಲಕ್ರಮೇಣ ಆ ಪ್ರತಿಭೆ, ಹೊತ್ತು-ಹೆರುವ ಜಂಜಾಟದಲ್ಲಿ ನಶಿಸಿಯೇ ಹೋಗುತ್ತದೆ. ಸಾಹಸ ಮಾಡಿ ಸ್ಟೇಜಿಗೆ ಬಂದರಂತೂ ವಾಹ್‌ವ್, ಭೇಷ್‌ಗಳ ಸಂಪಾದನೆಯ ಅನಿವಾರ್ಯತೆಗಳಿಗಾಗಿ ಎಷ್ಟೋ ಮಂದಿ ಸಂವೇದನಾ ಶೀಲ ಹಾಡುಗಾರ್ತಿ | ಹಾಡುಗಾರರು ತಮ್ಮ ಭಾವನೆಗಳನ್ನು ಮೆಟ್ಟಿ, ಎಲ್ಲವನ್ನು ಖಾಸಗಿಗೊಳಿಸುವ ಸರದಾರರಿಗಾಗಿ ತಮ್ಮ ಕಲೆಯನ್ನು ಮಾರಿಕೊಂಡಿದ್ದಾರೆ! ಈ ದ್ವಂದ್ವಗಳ ನಡುವೆಯೂ ಹೋರಾಟ, ಮತ್ತು ಅನಿಸಿಕೆಗಳಿಗಾಗಿ ಹಾಡುತ್ತಿರುವವರು ವಿರಳ.

ಇತ್ತೀಚೆಗೆ ನಾನು ಭೇಟಿಯಾದ ಬೆಂಗಾಲಿ–ಗುಜರಾತಿ ಮೂಲದ, ಹಿಂದೂಸ್ಥಾನಿ ಗಾಯಕಿ ಶ್ರೀಮತಿ ಕೌಮುದಿ ಮುನ್ಷಿ — ಸಂಪ್ರದಾಯ ಬದ್ಧ ಸಮಾಜದ ಸೊತ್ತಾದ ಸಂಗೀತ ರಂಜನೆಯ ಉದ್ಯೋಗದಲ್ಲಿ ತಮ್ಮ ಭಾವನೆಗಳಿಗೂ ಒತ್ತುಕೊಡುವ, ನೊಂದವರ ಆಕ್ರಂದನದ ಹಾಡುಗಳ, ಜನಪ್ರಿಯಗೊಳಿಸುವ ಸಾಹಸದ ಪ್ರಯತ್ನಕ್ಕೆ ಕೈ ಹಾಕಿದ್ದಾರೆ. ಭಜನೆ, ಘಜಲ್, ಟುಮುರಿ ಮತ್ತು ಗೀತೆಗಳನ್ನು ಹಾಡಿದಷ್ಟೇ ರಂಜನೀಯವಾಗಿ ಸ್ವಾತಂತ್ರ್ಯ ಸಂಗ್ರಾಮದ ಸಮಯದಲ್ಲಿ ಹೆಂಗಳೆಯರ ಭಾವನೆಗಳನ್ನು ಹಿಡಿದಿಟ್ಟಿರುವ ಹಲವಾರು ಕವಯಿತ್ರಿಯರ ಕವನಗಳನ್ನು, ಮರೆತು ಹೋದ ಪುಸ್ತಕಗಳಿಂದ ಹೆಕ್ಕಿತಂದು, ಸಂಗೀತಕ್ಕೆ ಜೋಡಿಸಿ, ಸೂಕ್ತ ಸಮಾರಂಭಗಳಲ್ಲಿ ಹಾಡಿ ತಮ್ಮ ಮಹಿಳಾ ವಿಮೋಚನಾ ಚಿಂತನೆಯ ಜವಾಬ್ದಾರಿಯನ್ನು ಸ್ವಲ್ಪ ಮಟ್ಟಿಗಾದರೂ ನಿರ್ವಹಿಸಿದ್ದಾರೆ.

ಎಲ್ಲಾ ಆದರ್ಶವಾದಿಗಳಿಗೂ ಇರುವ ಕನಸುಗಳಂತೆ ಈಕೆಗೂ ತಾನು ಹುಡುಕಿಟ್ಟಿರುವ ಹಾಡುಗಳನ್ನು ಧ್ವನಿಮುದ್ರಿಸಿ, ಜನಪ್ರಿಯಗೊಳಿಸಬೇಕೆಂಬ ಹಂಬಲ, ಆತುರ ೬೩ರ ಇಳಿವಯಸ್ಸಿನಲ್ಲೂ ಇನ್ನೂ ಉಳಿದಿದೆ. ಈ ರೀತಿಯ ಮೌನ ಚಿಲುಮೆಗಳು ಕಾಣಸಿಕ್ಕಾಗ ಸಮ ಸಮಾಜಿಗಳಿಗೆ ಸ್ಫೂರ್ತಿ ಬುಗ್ಗೆ ಏಳುತ್ತದೆ.

ಜಗದೀಶ

---

19ನೇ ಪುಟದಿಂದ

ನೋವು ನಮ್ಮನ್ನು ಪೀಡಿಸಲು ಪ್ರಾರಂಭಿಸಿದಾಗ ನಮ್ಮೆಲ್ಲ ಶಕ್ತಿಯನ್ನೂ ನಮಗೆ ಪ್ರಿಯವಾದ ಕಾರ್ಯಕದಲ್ಲಿ ತೊಡಗಿಸಿದಲ್ಲಿ ನೋವೇ ಪಲಾಯನ ಮಂತ್ರವನ್ನು ಜಪಿಸುತ್ತದೆ. ಏಕೆಂದರೆ ನೋವಿನಿಂದ ಜರ್ಜರಿತವಾದ ಮನಸ್ಸು ಶ್ರಮಪೂರ್ಣ ಕೆಲಸಗಳಲ್ಲಿ ಅಥವಾ ಸೃಜನಶೀಲ ಚಟುವಟಿಕೆಗಳಲ್ಲಿ ತನ್ನ ಸಾಮರ್ಥ್ಯವನ್ನು ಪ್ರಕಟಿಸುತ್ತದೆ, ಸಾಂತ್ವನವನ್ನು ಪಡೆಯುತ್ತದೆ.

ನೋವಿಗೆ ನಾವು ನಾಚಬೇಕಿಲ್ಲ, ಹಿಂಜರಿಯಬೇಕಿಲ್ಲ.

(ಮೈಸೂರು ಆಕಾಶವಾಣಿ ಸೌಜನ್ಯ)

ಡಾ|| ಎಚ್. ಎಸ್ ಸುಜಾತ.

# ಅಕ್ಕ ಪಕ್ಕ

ಸಮಾಜ ಮಹಿಳೆಯರನ್ನು ಪರಾವಲಂಬಿಗಳನ್ನಾಗಿ ಮಾಡುತ್ತದೆ. ಆದರೆ ಹೆಚ್ಚಿನ ಪುರುಷರು ಈ ಜವಾಬ್ದಾರಿಯನ್ನು ಹೊರಲು ಬಯಸುವುದಿಲ್ಲ.

ಮಲ್ಲಿಕಾ ಸಾರಾಬಾಯಿ
'ದಿ' ವೀಕ್'

ಕೊಲೆಗೀಡಾದ ನನ್ನ ಗಂಡನ ಹಳೆಯ ಮೋಟಾರ್ ಸೈಕಲ್ ರಕ್ತಸಿಕ್ತ ಅಂಗಿ ಇರುವ ಮನೆಯೇ ನನ್ನ ಹೋರಾಟದ ಸ್ಫೂರ್ತಿ.

ವಯೊಲೆಟ್ ಕಮೊರೊ
ನಿಕರಗುವಾದ ಅಧ್ಯಕ್ಷ

ನೃತ್ಯ ಪವಿತ್ರವಾದದ್ದು. ಅದು ದೇವರೊಡ ನಮ್ಮ ಸಂವಹನವನ್ನು ಸಾಧ್ಯವಾಗಿಸುತ್ತದೆ, ನೃತ್ಯ ಕಲಾವಿದೆಗೆ ನೃತ್ಯ ಒಂದು ತಪಸ್ಸು.

ಹೇಮಮಾಲಿನಿ

ನಾನು ನನ್ನ ಹೆಂಡತಿಯ ಗಂಡ.

ವಿ.ಪಿ.ಸಿಂಗ್
'ದಿ ವೀಕ್'

ನನ್ನ ಗಂಡ ನನ್ನೊಂದಿಗಿಂತ ಹೆಚ್ಚಿನ ಸಮಯವನ್ನು ಎಕೆ-47 ಜತೆ ಕಳೆಯುತ್ತಾರೆ.

ಪಂಜಾಬ್ ಪೋಲಿಸ್ ಅಧಿಕಾರಿಯೊಬ್ಬರ ಪತ್ನಿ
'ಪ್ರೋಬ್'

ಸತತ್ಪ್ರಪ್ಪ ಸೋದರಿಯರಿಗೆ ಸಹಾಯ ಮಾಡಬೇಕಿದ್ದ ಮುಖ್ಯ ಮಂತ್ರಿಯವರೇ ಅವರ ದಮನಕ್ಕೆ ಪ್ರಯತ್ನಿಸುತ್ತಿರ. ನನಗೆ ವಿಷಾದವುಂಟು ಮಾಡಿದೆ. ಮಹಿಳೆಯರು ಸ್ವಾವಲಂಬಿಯಾಗದಿದ್ದಲ್ಲಿ ಶೋಷಣೆ, ದಬ್ಬಾಳಿಕೆ ಮುಂದುವರೆಯುತ್ತದೆ ಕೇರಳ ಮುಖ್ಯಮಂತ್ರಿ ಇ. ಕೆ. ಯನಾಯನಾರ್ ಬಗ್ಗೆ ಕವಯಿತ್ರಿ

ಸುಗತ ಕುಮಾರಿ

ಮೈ ತೋರಿಸಲು ಆರಂಭಿಸಿದರೆ ಅಭಿನಯದಕ್ಷತೆ ನೆಲೆಗುಟ್ಟೆ ತಪ್ಪಿದಂತೆಯೇ ಸರಿ. ಏಕೆಂದರೆ ಹಾಗೆ ನೋಡುವುದರಿಂದ ನಿಗೂಢತೆಯ ಅಂಶವೇ ಮಾಯವಾಗುತ್ತದೆ

ನವನಾಯಕಿಯರ ಮೈ ತೋರುವ ಪ್ರವೃತ್ತಿ ಟೀಕಿಸಿ
'ಸ್ಕ್ರೀನ್' ಓದುಗರೊಬ್ಬರ ಸ್ಪಂದನೆ.

'ತಂದೆಯ ಇಚ್ಛೆಗೆ ವಿರುದ್ಧವಾಗಿ ನಾನು ಬೀಜಿಂಗ್‌ನಲ್ಲಿ ಓಡುವುದಿಲ್ಲ.

'ಸಂಡೇ ಅಬ್ಸರ್‌ವರ್'

ಕಾಮನ್‌ವೆಲ್ತ್ ಕ್ರೀಡೆಗಳಿಂದ ಪಿ. ಡಿ. ಉಷಾ ಹಿಂದೆಗೆದಿದ್ದು ಅನಿರೀತ. ಆಕೆ ಹೋಗಲಿಲ್ಲ ಎಂದರೆ ಭ್ರಷ್ಟಾಭರ ಭಾವ ವಹಿಸದು ಎಂದಾಗಬೇಕೆಳೆ ಈನಿಲುವು ಸ್ವಲ್ಪ ಅತಿ ಆಯಿತು.

'ಸ್ಪೋರ್ಟ್ಸ್ ವರ್ಲ್ಡ್' ನಲ್ಲಿ.

ರೈತರು ಇಂದು ದುಷ್ಪಟಗಳಿಗೋ, ಸೋಮಾರಿತನಕ್ಕೋ ರಾಜಕೀಯದ ಗೀಳಿಗೂ ಗಂಟುಬಿದ್ದು ಇತ್ತ ವ್ಯವಸಾಯಕ್ಕೂ ಇಲ್ಲವಾಗಿ ಅತ್ತ ಮನೆಗೂ ಉಪಯೋಗವಾಗದಂಥ ಪರಿಸ್ಥಿತಿ ತಲುಪಿದ್ದಾರೆ. ಇಂತಹ ಸ್ಥಿತಿಯಲ್ಲಿ ಮನೆ ಮನೆಗಳಲ್ಲೂ ರೈತ ಮಹಿಳೆಯರು ಬೆನ್ನೆಲುಬಾಗಿ ನಿಂತು ಕೃತ್ತಿಯನ್ನು ಸವಾಲಾಗಿ ಸ್ವೀಕರಿಸಿದ್ದಾರೆ.

ಮಂಡ್ಯ ಜಿಲ್ಲಾ ಪರಿಷತ್ ವಿರೋಧ ಪಕ್ಷದ ನಾಯಕ.

ಹೆಂಗಸರು ಕಷ್ಟದ ಕೆಲಸ ಮಾಡ್ತಾರೆ. ಸುಖದ ಕೆಲಸ ಮಾತ್ರ ಗಂಡಸರಿಗೆ.

ಮನೋರಮ ಮದ್ವರಾಜ್

ಗೃಹಮಂಡಳಿ ನಿರ್ಮಿಸುವ ಕಡಿಮೆ ಆದಾಯದ ಮನೆಗಳನ್ನು ಮಹಿಳೆಯರಿಗೆ ಮಾತ್ರ ನೀಡಬೇಕು. ಇದರಿಂದ ನಿಗದಿತ ವೇಳೆಗೆ ಮಂಡಳಿಗೆ ಕಂತುಗಳ ರೂಪದಲ್ಲಿ ಹಣ ಬರುತ್ತದೆ. ಆ ಕುಟುಂಬಕ್ಕೆ ಆ ಮನೆಯೂ ಉಳಿಯುತ್ತದೆ.

ವಿಧಾನ ಸಭಾ ಉಪಾಧ್ಯಕ್ಷೆ



10 ನೇ ಪುಟದಿಂದ ಮುಂದುವರಿದಿದೆ

ಹಗುತ್ತದೆ. ಲೈಂಗಿಕ ಕ್ರಿಯೆಯೆಂದರೇನು ಎಂಬ ಅರ್ಥವು ಗೊತ್ತಿಲ್ಲದ, ಇಂತಹ ಆಮಿಷಗಳಿಂದ ಆಕರ್ಷಿತರಾದ ಹುಡುಗಿಯರು ತಮ್ಮ ಮೇಲೆ ಉಂಟಾಗುತ್ತಿರುವ ದೈಹಿಕ ಹಿಂಸೆಯ ಘೋರತೆಯನ್ನು ಅರಿಯಲಾಗದವು ಈ ಎಳೆಯ ಕಂದಮ್ಮಗಳು.

ಹಳ್ಳಿಗಾಡುಗಳಲ್ಲಿ ವಾಸಮಾಡ್ಕುವ ಹೆಣ್ಣುಮಕ್ಕಳು ವಿದ್ಯಾಭ್ಯಾಸಕ್ಕಾಗಿ ಮೂರು ನಾಲ್ಕು ಕಿಲೋಮೀಟರ್ ದೂರದ ಶಾಲೆಗೆ ಹೋಗುವ ಸಂದರ್ಭದಲ್ಲಿ ಅತ್ಯಾಚಾರಕ್ಕೊಳಗಾದ ಪ್ರಕರಣಗಳು ಸಾಕಷ್ಟಿವೆ. ಪ್ರತಿದಿನ ಪ್ರಯಾಣ ಮಾಡುವ ಈ ಹುಡುಗಿಯರನ್ನು ಗಮನಿಸುವ ಪುರುಷರು ಸಂದರ್ಭದ ಹೊಂಚ್ಹಾಕಿ ಅತ್ಯಾಚಾರವೆಸಗುತ್ತಾರೆ. ಇಂತಹ ಪ್ರಸಂಗಗಳು ನಡೆದಾಗ ಉಂಟಾಗುವ ಪರಿಣಾಮ ಭೀಕರವಾದುದು. ಅತ್ಯಾಚಾರಕ್ಕೆ ಒಳಗಾದ ಎಳೆಯ ಮಗು ತನ್ನ ಮೇಲಿನ ಆಕ್ರಮಣವನ್ನು ಸಹಿಸಿಕೊಳ್ಳಬೇಕಾಗುತ್ತದೆಯಲ್ಲದೆ, ವಿದ್ಯಾಭ್ಯಾಸದಿಂದಲೂ ವಂಚಿತರಾಗುತ್ತಾರೆ. ಯಾವ ತಪ್ಪನ್ನೂ ಮಾಡದ ಈ ಹುಡುಗಿಯರು ಶಿಕ್ಷೆಯನ್ನನುಭವಿಸುತ್ತಾರೆ. ತಂದೆತಾಯಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ನೀಡುತ್ತಾರೆ, ಇದು ಇತರ ಹೆಣ್ಣು ಮಕ್ಕಳ ಮೇಲೂ ಅತಿಯಾದ ಪರಿಣಾಮವನ್ನು ಬೀರುತ್ತದೆ.

ಶಾಲೆಯಲ್ಲಿ ವಿದ್ಯಾಭ್ಯಾಸ ಹೇಳಿಕೊಡುವ ಉಪಾಧ್ಯಾಯರು, ಮನೆಪಾಠ ಹೇಳಿಕೊಡುವ ಉಪಾಧ್ಯಾಯರೂ ತಮ್ಮ ಎಳೆಯ ವಿದ್ಯಾರ್ಥಿನಿಯರ ಮೇಲೆ ನಡಸುವ ಅತ್ಯಾಚಾರ ಪ್ರಕರಣಗಳು ಅಪರೂಪವೇನಲ್ಲ. ಸಲುಗೆಯ ನೆಪದಲ್ಲಿ, ಮೆಚ್ಚುಗೆಯನ್ನು ವ್ಯಕ್ತಪಡಿಸುವ ನೆಪದಲ್ಲಿ ಕೆಲವೊಮ್ಮೆ ಆಮಿಷಗಳನ್ನೊಡ್ಡಿ, ಇಲ್ಲವೇ ಬಲಾತ್ಕಾರದಿಂದ ಆಕ್ರಮಣ ನಡೆಸಲಾಗುತ್ತದೆ.

ಎಳೆಯ ಬಾಲಕಿಯರನ್ನು ಹೆದರಿಸಿ, ಬೆದರಿಸಿ ಅತ್ಯಾಚಾರಕ್ಕೆ ಒಳಗಾಗುವಂತೆ ಮಾಡಲಾಗುತ್ತದೆ. ಯಾವುದೋ ಅರಿಯದೆ ಮಾಡಿದ ತಪ್ಪನ್ನು ದೊಡ್ಡದು ಮಾಡಿ, ಅದನ್ನು ಬಹಿರಂಗ ಮಾಡುತ್ತೇನೆಂಬ ಬೆದರಿಕೆಯೊಡ್ಡಿ, ಸುಳ್ಳು ಬೆದರಿಕೆಯನ್ನು ಹಾಕಿಯೊ ತಾವು ನಡೆಸುವ ಹಿಂಸೆಯನ್ನು ಒಪ್ಪಿಕೊಳ್ಳುವಂತೆ ಮಾಡಲಾಗುತ್ತದೆ. ಒಮ್ಮೆ ಇಂತಹ ಆಕ್ರಮಣಕ್ಕೆ ಬಲಿಯಾದ ಹೆಣ್ಣುಮಗು ಇಂತಹ ಬೆದರಿಕೆಗಳಿಂದಲೇ ಪುನಃ ಪುನಃ ಹಿಂಸಗೆ ಒಳಗಾಗುವಂತೆ ಒತ್ತಾಯಿಸಲಾಗುತ್ತದೆ.

ಒಂದೇ ಊರಿನಲ್ಲಿರುವ ಪರಿಚಿತ ಪುರುಷರು, ಶಾಲೆಗಳಲ್ಲಿ ಓದುವ ಸಹ ವಿದ್ಯಾರ್ಥಿಗಳು, ವಿಕೃತ ಮನಸ್ಥಿತಿಯ ಹುಡುಗರು ಮುಗ್ಧ ಬಾಲಕಿಯರ ಮನೆಗೆ ಶಾಲೆಗಳ ವಿಳಾಸಕ್ಕೆ ಅನಾಮಧೇಯ ಪತ್ರಗಳನ್ನು ಬರೆಯುವುದರ ಮೂಲಕ ಮಾನಸಿಕ ಹಲ್ಲೆಯನ್ನು ಮಾಡುತ್ತಾರೆ. ಅನಾಮಧೇಯವಾಗಿ ಬರೆಯಲ್ಪಡುವ ಪತ್ರಗಳಲ್ಲಿ ಅನಾರೋಗ್ಯಕರ, ಕೆಲವೊಮ್ಮೆ ಅಸಹ್ಯ, ಭಾಷೆ, ಚಿತ್ರಗಳನ್ನು ಒಳಗೊಂಡಿರುತ್ತವೆ. ಕೆಲವೊಮ್ಮೆ ಹುಡುಗಿಯರೇ ಸಮ್ಮತಿ ನೀಡಿದ ರೀತಿಯಲ್ಲಿ ಬರೆಯಲಾಗುತ್ತದೆ. ಇಂತಹ ಪತ್ರಗಳು ಸಾಮಾನ್ಯವಾಗಿ ಮನೆಯಲ್ಲಿನ ಹಿರಿಯರ ಕೈಗೆ ಅಥವಾ ಉಪಾಧ್ಯಾಯರ ಕೈಗೆ ಸಿಗುವುದು. ಇದರಿಂದ ಉಂಟಾಗುವ ಪರಿಣಾಮಗಳು ಘೋರವಾದುದು.

ಶಾಲೆಯಲ್ಲಿ ಉಪಾಧ್ಯಾಯರ ಕೈಗೂ, ಮನೆಯಲ್ಲಿ ತಂದೆ, ಅಥವಾ ಅಣ್ಣಂದಿರ ಕೈಗೆ ಸಿಕ್ಕಾಗ, ತಪ್ಪಿತಸ್ಥರನ್ನು ಪತ್ತೆ ಹಚ್ಚುವ ಬದಲು ಹುಡುಗಿಯರೇ ಜವಾಬ್ದಾರರೆಂಬ ದೃಷ್ಟಿಯಿಂದ ನೋಡಿ ಅವರನ್ನು ಶಿಕ್ಷಿಸುವ ಪ್ರಯತ್ನ ಮಾಡುತ್ತಾರೆ. ಇಂತಹ ನಿದರ್ಶನಗಳಲ್ಲಿ ಹೆಣ್ಣುಮಕ್ಕಳನ್ನು ಹೊಡೆದು, ಬಡಿದು, ಶಿಕ್ಷಿಸುವುದರ ಜೊತೆಯಲ್ಲಿ ಅವಳ ವಿದ್ಯಾಭ್ಯಾಸಕ್ಕೆ ಸಂಚಕಾರ ನೀಡಲಾಗುತ್ತದೆ. ಅವಳ ನಡೆ – ನುಡಿಯ ಮೇಲೆ ಸದಾ ಕಣ್ಣಿಡಲಾಗುತ್ತದೆ.

ನೇರವಾಗಿ ನಡೆಯುವ ಅತ್ಯಾಚಾರ ಪ್ರಕರಣಗಳು ಬೆಳಕಿಗೆ ಬರುವುದು ಅಪರೂಪ ಎಳೆಯ ಹಸುಳೆಯರನ್ನು ಬೆದರಿಕೆಗೆ ಒಳಪಡದೇನೆ ಬಾಯಿ ಮುಚ್ಚಿಸಿ ಪುನಃ ಪುನಃ ಹಿಂಸೆಯ ವಿಷ ಚಕ್ರಕ್ಕೆ ಬಲಿಯಾಗುವಂತ ಪ್ರೇರೇಪಿಸುತ್ತದೆ. ಅಘಾತಕ್ಕೊಳಗಾದ ಪುಟ್ಟ ಮನಸ್ಸುಗಳು ತಂದೆ-ತಾಯಂದಿರಲ್ಲಿ ಇಂತಹ ಈ ಆಘಾತವನ್ನು ಹಂಚಿಕೊಳ್ಳಲಾರವು.

ತಂದೆ ತಾಯಿಯರಿಗೆ ವಿಷಯ ತಿಳಿದಿದ್ದರೂ, ಹುಡುಗಿ ದೊಡ್ಡವಳಾಗದ ಕಾರಣ ಸುಭವಾಗಿ ಮುಚ್ಚಿಬಿಡುತ್ತಾರೆ. ನಾಲ್ಕು ಜನರಿಗೆ ವಿಷಯ ತಿಳಿದರೆ ಮಗಳ ವಿವಾಹಕ್ಕೆ ಭವಿಷ್ಯದ ಜೀವನಕ್ಕೆ ಕುಂದು ಬರುತ್ತದೆ ಎಂಬ ಭಯದಿಂದ ಯಾರಿಗೂ ವಿಷಯ ತಿಳಿಸದೆಮುಚ್ಚಿಡುತ್ತಾರೆ.

ತಮ್ಮ ಹಸುಕಂದನ ವೇಲೆ ನಡೆದ ಹಲ್ಲೆಯ ಅರಿವಿದ್ದರೂ ಹುಡುಗಿಯರದೇ ತಪ್ಪು ಹಿಡಿಯುವ ತಂದೆ-ತಾಯಿಯರೇ ಹೆಚ್ಚು. ಇದರಿಂದಾಗಿ ಮಕ್ಕಳ ಮೇಲೆ ಸದಾ ಅನುಮಾನ.ಗುಮಾನೆ, ಮಾಡಿ ಮಕ್ಕಳನ್ನು ಕಾಯುವ ಕೆಲಸಕ್ಕೆ ತೊಡಗುತ್ತಾರೆ. ಅಪ್ರಾಪ್ತ ವಯಸ್ಸಿ ಬಾಲಕಿಯರ ಮೇಲೆ ನಡೆಯುವ ಅತ್ಯಾಚಾರ ಪ್ರಕರಣಗಳು ನ್ಯಾಯಾಲಯದೇ ದಾಖಲಾದ ಪ್ರಕರಣಗಳು

ಸಾಕ್ಷಿ-ಪುರಾವೆಗಳ ಕೊರತೆಯಿಂದ ಬಿದ್ದು ಹೋಗುತ್ತವೆ, ಲೈಂಗಿಕ ಕ್ರಿಯಯೆನೆಂದು ಅರ್ಥಮಾಡಿಕೊಳ್ಳಲಾಗದ ಮನಸೊಂದು ನ್ಯಾಯಾಲಯದ ಕಟ್ಟೆಯೇರಿ ತನ್ನ ವೇಲೆ ನಡೆದ ಆಕ್ರಮಣದ ಬಗ್ಗೆ ಸಾಕ್ಷಿ ನೀಡ ಬೇಕಾಗುತ್ತದೆ, ಎಳೆಯಮಗುವನ್ನು ನ್ಯಾಯಾಲಕ್ಕೆ ಕರೆತರುವುದೂ ಸಾಕ್ಷಿ ನೀಡುವ ದೃಷ್ಟಿಯಿಂದ ತಂದೆ ತಾಯಿ ಅಥವಾ ಇನ್ನ್ಯಾರೋ ಆ ಕಂದಮ್ಮಗಳಿಗೆ ಆ ಕ್ರಮಣದ ಅರ್ಥವನ್ನು ವಿವರಿಸಿ ಹೇಳುವುದುಇತ್ಯಾದಿಗಳು ಅಮಾನವೀಯವಾದವುಗಳು.

ಎಳೆವಯಸ್ಸಿನ ಬಾಲೆಯರ ಮೇಲೆ ನಡೆಯುವ ಲೈಂಗಿಕದೌರ್ಜನ್ಯಗಳು ಅವರ ಜನ್ಯ ಮನಸ್ಸಿನ ಮೇಲೆ ಪರಿಣಾಮಗಳು ಘೋರವಾದುದು ಜೀವ ಪರ್ಯಂತ ಭಯ ಲೈಂಗಿಕ ಹೆದರಿಕೆ ಆಸಹ್ಯ ಭಾವನೆ ಮಾನಸಿಕ ಅಘಾತ ಉಂಟಾಗುತ್ತದೆ ಕೆಲವೊಮ್ಮೆಇಂತಹ ಪ್ರಕರಣಗಳು ಆತ್ಮಹತ್ಯೆಯಲ್ಲಿ ಕೊನೆಗೊಂಡಿರುವ ನಿದರ್ಶನಗು ಉಂಟೂ

ಈಗಿರುವ ನಮ್ಮ ಕುಟುಂಬ ಪದ್ಧತಿಯಲ್ಲಿ ಮಕ್ಕಳಿಗೆ ನೀತಿಕತೆಯೆಬಗ್ಗೆ ವೈಜ್ಞಾನಿಕವಾಗಿ, ತಿಳಿಯ ಹೇಳುವ ಅವಕಾಶವಿಲ್ಲದಿರುವುದು ದುರಂತಗಳಿಗೆ ಕಾರಣವಾಗುತ್ತದೆ. ತಂದೆ-ತಾಯಿ ಮತ್ತು ಮಕ್ಕಳ

ನಡುವಿರುವ ಸಂಕೋಚನ ಸಂಬಂಧಗಳು, ಮಕ್ಕಳಿಗಿರುವ ಅಜ್ಞಾನ ಮತ್ತು ಚರ್ಚೆಗೆ ಆವಕಾಶವಿರದಿರವುದು ಮುಂತಾದವುಗಳು ಈ ಎಲ್ಲಾ ದೌರ್ಜನ್ಯಗಳಿಗೆ, ದುರಂತಗಳಿಗೆ ಕಾರಣವಾಗುತ್ತದೆ.

---

## ಪ್ರೀತಿ- ಸಾವಿನೊಂದಿಗೆ ?

ಮಾತಾ ಪಿತೃಗಳು ಇಚ್ಛೆಗೆ ವಿರುದ್ಧವಾಗಿ ತನ್ನ ಮನ ಮೆಚ್ಚಿದವನನ್ನು ಕೈ ಹಿಡಿದ ತಪ್ಪಿಗೆ 22ರ ಫರ್ಹಾ ಮೊಹಮ್ಮದ್ ವಿವಾಹದ ನಂತರ ಎದುರಿಸಿದ ಸಂಕಷ್ಟಗಳು ಚಲನ ಚಿತ್ರಕ್ಕೆ ಸ್ಫೂರ್ತಿಯಾಗಬಹುದು. ಆದರೆ ತನಗೆ ಅಧ್ಯಾಪಕನಾಗಿದ್ದ ಹಿಂದೂ ಯುವಕ ಅಭಿರಾಂ ಬಿಸ್ವಾಲ್‌ರನ್ನು ವಿವಾಹವಾದದ್ದಕ್ಕೆ ಆಕೆ ತನ್ನ ಜೀವನವನ್ನೇ ಬಲಿಕೊಡಬೇಕಾಗಿ ಬಂದದ್ದು ದುರಂತ ಸತ್ಯ. ಪಾಕಿಸ್ತಾನದ ಕರಾಚಿಯಲ್ಲಿನ ಭಾರತದ ಹೈ ಕಮಿಷರ್ ಕಛೇರಿ ಫರ್ಹಾ 22 ಜನವರಿ 90ರಂದು ಕರಾಚಿಯ ಆಸ್ಪತ್ರೆಯಲ್ಲಿ ಶೇ. 65ರಷ್ಟು ಸುಟ್ಟ ಗಾಯಗಳಿಂದ ಮೃತಳಾದಳೆಂದು ತಿಳಿಸಿದೆ. ಆಕೆಯ ತಾಯಿ ತನ್ನ ಮಗಳು ಅಡಿಗೆ ಮಾಡುವಾಗ ನಡೆದ ಬೆಂಕಿ ಅಪಘಾತದಿಂದ ಆಸ್ಪತ್ರೆ ಸೇರಿದ್ದಳೆಂದು ಹೇಳಿದ್ದಾಳೆ. ಫರ್ಹಾ ಪತಿ ಹಾಗೂ ಸ್ತ್ರೀ ಹಕ್ಕು ಭಾಧ್ಯತಾ ಸಮಿತಿಯವರು ಅದನ್ನು ಅಪಘಾತವಲ್ಲ ಕೊಲೆಯೆಂದೇ ಹೇಳುತ್ತಾರೆ.

ಫರ್ಹಾ 1984ರಲ್ಲಿ ರೂರ್ಕೆಲಾದ ಮುನ್ಸಿಪಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಪೊಲಿಟಿಕಲ್ ಸೈನ್ಸ್‌ನ ಲೆಕ್ಚರರ್ ಅಭಿರಾಂ ಬಿಸ್ವಾಲ್‌ನ ಪರಿಚಯವಾಯಿತು ಪರಿಚಯ ಪ್ರೇಮವಾಗಿ ಮದುವೆಯ ಮಾತು ಬಂದಾಗ ಫರ್ಹಾ ತಂದೆ (ಒರಿಸ್ಸಾದ ಲೋಕೋಪಯೋಗಿ ಇಲಾಖೆಯಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್,) ತಾಯಿಗಳು-ಸಾಮಾನ್ಯ ಸ್ತರದ, ಹಿಂದೂ ಯುವಕರೊಂದಿಗೆ ತಮ್ಮ ಪುತ್ರಿ ಮದುವೆಯಾಗುವುದಕ್ಕೆ ತೀವ್ರ ವಿರೊಧಿಗಳಾಗಿದ್ದರು, ಬಿಸ್ವಾಲ್‌ನ ಕುಟುಂಬದವರು ನಿರ್ಲಿಪ್ತರಾಗಿದ್ದರು. ಈ ತೀವ್ರ ವಿರೋಧದ ನಡುವೆಯೂ 89 ರ ಜೂನ್ 15ದ ರಂದು ಘಜಿಯಾಬಾದ್‌ನಲ್ಲಿ ಸ್ಪೆಷಲ್ ಮ್ಯಾರೀಜ್ ಪ್ರಕ್ಕಾರ ವಿವಾಹವಾದರು. ಬಿಸ್ವಾಲ್ ಕರ್ತವ್ಯದ ತರೆಗೆಂದು ದೆಹಲಿ ಬಿಟ್ಟು ಹೋದ ಮೇಲೆ ಫರ್ಹಾ ಕ್ಯಾಂಪಸ್‌ಗೆಂದು ಬಸ್ಸಿಗೆ ಗೆಳತಿಯೊಡನೆ ಕಾಯುತ್ತಿದ್ದಾಗ ಅವಳ ತಂದೆ, ಅಂಕಲ್ ಅವಳನ್ನು ಕರೆದೋಯ್ದಿದ್ದರು.ಅಲ್ಲಿಂದ ಅವಳು ಕರಾಚಿಗೆ ತೆರಳಿ

ದ್ದು ಅವಳ ಪತ್ರದಿಂದ ತಿಳಿಯಿತು. ಫರ್ಹಾಳನ್ನು ಸಂಪರ್ಕಿಸಲು ಇನ್ನಿಲ್ಲದಷ್ಟು ಯತ್ನಿಸಿ ವಿಫಲನಾದ ಬಿಸ್ವಾಲ್ ಮಾನುಷಿ ಹಾಗು ನಾಗರೀಕಾ ಹಕ್ಕುಭಾಧ್ಯತಾ ಸಮಿತಿಯ ಸಹಾಯದಿಂದ ಸುಪ್ರೀಂ ಕೋರ್ಟ್‌ಗೆ ಹೇಬಿಯಸ್ ಕಾರ್ಪಸ್ ಅರ್ಜಿಯನ್ನು ಸುಪ್ರೀಂ ಸಲ್ಲಿಸಿದಾಗ ನವೆಂಬರ್27ರಂದು ಫರ್ಹಾಳನ್ನು ಹಾಜರುಪಡಿಸಲು ಆಕೆಯ ತಾಯ್ತಂದೆಗಳಿಗೆ ಕೋರ್ಟ್ ಆದೇಶಿಸಿತು. ಆಕೆ ಸ್ವಇಚ್ಛೆಯಿಂದ ಕರಾಚಿಗೆ ತೆರಳಿದ್ದಾಳೆಂದು ಅವರು ಉತ್ತರಿಸಿದ್ದರು. ಅಕ್ಟೋಬರ್28ರಂದು ಬಿಸ್ವಾಲ್‌ಗೆ ಫರ್ಹಾ ಬರೆದ ಪತ್ರವೇ ಪ್ರಮುಖ ಸಾಕ್ಷಿಯಾಗಿತ್ತು. ಆದರ ಸಾರಾಂಶ ಹೀಗಿದೆ:(ಬಿಸ್ವಾಲ್ ದೆಹಲಿಯಲ್ಲಿಲ್ಲದ ಸಮಯ ನೋಡಿಕೊಂಡು ಸ್ನೇಹದಿಂದ ಸವಿಯಾದ ಮಾತುಗಳಿಂದ ತನ್ನನ್ನ ಒಲಿಸಿಕೊಂಡು ತನ್ನ ಗೆಳತಿಗೂ ಅನುಮಾನ ಬಾರದಂತೆ ಸೌಜನ್ಯದಿಂಡ ನಡೆದುಕೊಂಡಿದ್ದರು, ನಂತರ ಪೂರ್ವಯೋಚಿತ ನಿರ್ಧಾರದಂತೆ ತನ್ನನ್ನು ಕರಾಚಿಗೆ ಬಲವಂತದಿಂದ ಕರೆದುಕೊಂಡು ಬಂದಿದ್ದಾರೆ. ತಾನೆಷ್ಟು ಯತ್ನಿಸಿದರೂ ಭಾರತಕ್ಕೆ ಬರಲಾಗುತ್ತಿಲ್ಲ, ತನ್ನನ್ನು ಹಗಲಿರುಳೂ ಕಾಯುತ್ತಿದ್ದಾರೆ. ಪಾಸ್‌ಪೋರ್ಟ್‌ನ್ನೂ ಸೀಜ್ ಮಾಡಿ ಖಾಲಿಹಾಳೆಗಳಮೇಲೆ ಸಹಿಹಾಕಿಸಿಕೊಂಡಿದ್ದಾರೆ. ಬಿಸ್ವಾಲ್ ಹೇಗಾದರೂ (ಪ್ರಯತ್ನಿಸಿ ಕರಾಚಿಗೆ ಬಂದು ತನ್ನನ್ನು ಕರೆದುಕೊಳ್ಳಬೇಕು. ಹೀಗಾದರೂ ಸತಿಪತಿಗಳು ದೂರವಾಗಿರಬೇಕು, ಮಗಳ ಸಾವನ್ನಾದರೂಸ್ವೀಕರಿಸಿಯೇವು ಆದರೆ ಆಕೆ ಬಿಸ್ವಾಲ್‌ನ ಪತ್ನಿಯಾಗಿರುವುದು ತಮಗೆ ಸಹ್ಯವಲ್ಲವೆಂದು ತನ್ನ ತಾಯಿ,ತನ್ನ ಆಂಟಿಗೆ ಬರೆದ ಪತ್ರದ ಸಾಲುಗಳನ್ನು ಪತ್ರದಲ್ಲಿ ಉಗ್ಗರಿಸಿದಳು) ಈಪತ್ರದಲ್ಲಿನ ಆಶೆಯದಂತೆ ಕೋರ್ಟ್ ಭಾರತದಹೈಕಮಿಷನ್ ಕಛೇರಿ ಮತ್ತು ರಾಯಭಾರಿ ಕಚೇರಿಗಳ ಮೂಲಕ ಭಾರತ ಸರ್ಕಾರ ಸರಿಯಾದ ಕ್ರಮ ಕೈಗೊಳ್ಳಬೇಕೆಂದು ಆದೇಶನೀಡಿತು ರಾಯಭಾರಿ ಕಛೇರಿಯಿಂದ ಫರ್ಹಾಗೆ ಹೋದ ಪತ್ರಗಳೆಲ್ಲವೂ ಆ ಹೆಸರಿನಿಂದ ವ್ಯಕ್ತಿ ಆ ವಿಳಾಸದಲ್ಲಿಲ್ಲವೆಂದು ವಾಪಸ್ಸು. ಜನವರಿ ರಂದು ಫರ್ಹಾ ಚಿಕ್ಕಪ್ಪನ ಕರೆಯ ಮೇರೆಗೆ ರಾಯಭಾರಿಯ ಅಧಿಕಾರಿಗಳು ಕರಾಚಿಗೆಯ ಡಾ|ಜಿಯಾವುದ್ದೀನ್ ಆಸ್ಪತ್ರೆಗೆ ಧಾವಿಸಿದರು ಸುಟ್ಟ ಗಾಯಗಳಿಗೆ ಚಿಕಿತ್ಸೆ ಪಡೆಯುತ್ತಿದ್ದ ಫರಾಹಳನ್ನು ಮಾತನಾಡಿಸಲಾಗದೆ ಕೆಲದಿನಗಳು ಬಿಟ್ಟು ಅದೇ ಸ್ಥಳಕ್ಕೆ ಬಂದರು. ಆಕೆ ಆಗ ತುಂಬ ಅಧಿಕಾರಿಗಳಿಗೆ ಭೇಟಿಯಾಗಿ ವಿದೇಶಿವೇತನ ಕೊಡಿಸುವ ಆಮಿಷವೊಡ್ಡಿದ ಬಿಸ್ವಾಲ್‌ನನ್ನು ನಂಬಿ ವಿವಾಹವಾದ ಫರ್ಹಾ ತಾನು ಮಾಡಿದ್ದು ತಪ್ಪುಎಂದೆನಿಸಿ ಶ್ಚಾತ್ತಾಪ ಪಟ್ಟು ಸ್ವ-ಇಚ್ಛೆಯಿಂದಲೇ ಕರಾಚಿಗೆ ಬಂದಳು ಎಂದು ಹೇಳಿದಳು. ಇದರ ಮರುದಿನವೆ ನೂರುದ್ದಿನ್ ಹಾಸ್ಪೆಟಲ್‌ನ ಡಾ| ಸುಭಾಸ್ ರಾಯಭಾರಿಗಳಿಗೆ

ಫರ್ಹಾ ಹೃದಯಘಾತದಿಂಪ ಮುಂಜಾನೆ ೧ ಘಂಟೆಗೆ ಮರಣಹೊಂದಿದ್ದಳೆಂದು ಸುದ್ದಿ ಕಳುಹಿಸಿದರು ಭಾಗತೆಡ ರಾಯಭಾರಿ ಕಛೇರಿಯಿಂದ ಸುದ್ದಿ ತಿಳಿದ ಬಿಸ್ವಾಲ್ ಶವವನ್ನು ತಾಯ್ನಾಡಲ್ಲಿ ಸಂಸಾರಕ್ಕೊಳಪಡಿಸಬೇಕೆಂದು ಬಯಸಿದ್ದರೂ ಶವವನ್ನು ಆಸ್ಪತ್ರೆಯ ಅಧಿಕಾರಿಗಳು, ಪೊಲೀಸರು ಕರಾಚಿಯಲ್ಲಿದ್ದ ಫರ್ಹಾ ತಾಯಿಗೆ ನೀಡಿದ್ದರು

ಫರ್ಹಾ ಆಸ್ಪತ್ರೆಗೆ ಮರಣಪತ್ರದ ಹೇಳಿಕೆಗೂ ರಾಯಭಾರಿ ಕಛೇರಿಯ ಟೆಲೀಕ್ಸ್ ಸಂದೇಶಕ್ಕೂ ಬಹಳಷ್ಟು ಅಸಾಮ್ಯತೆಯಿದೆ. ಬಿಸ್ವಾಲ್‌ನಲಾಯರ್ ಈ ಬಗ್ಗೆ ಕೋರ್ಟ್‌ನ ಗಮನ ಸೆಳೆದರು. (ಮರಳಿ ಪತ್ರ ಆಸ್ಪತ್ರೆಯ ಹೆಸರು ಡಾ|ಜಿಯಾವುದ್ದೀನ್ ಎಂದಿದೆ ನವೆಂಬರ್‌ನಲ್ಲಿ ಫರ್ಹಾ ಆಸ್ಪತ್ರೆಗೆ ಸುಟ್ಟಗಾಯಗಳು ಚಿಕಿತ್ಸೆಗಾಗಿ ದಾಖಲಾದಳು ಮತ್ತು ಜನವರಿ ೨೨ ರಂದು ೨.೪೦ಕ್ಕೆ ಶ್ವಾಸಕೋಶ ಮತ್ತು ಹೃದಯಗಳ ಅಸಮರ್ಪಕ ಕಾರ್ಯನಿರ್ವಹನೆಯಿಂದ ಮರಣಳಾದಳು ಎನ್ನುತ್ತದೆ. ಟೆಲೆಕ್ಸಿನಲ್ಲಿನ ಸಂದೇಶಕ್ಕೂ ಮರಣ ಪತ್ರಕ್ಕೂ ಅಜಗಜಾಂತರ ವ್ಯತ್ಯಾಸವಿತ್ತು) ಆದರೆ ಫರ್ಹಾ ಮರಣ ಹೊಂದಿದುದರಿಂದ ಕೋರ್ಟ್ ಹೇಬಿಯಸ್‌ಕಾರ್ಪಸ್ ಅರ್ಜಿಯನ್ನು ಫೆಬ್ರವರಿ ೧೨ ರಂದು ವಜಾ ಮಾಡಿತು ಬಿಸ್ವಾಲ್ ಮತ್ತು ಸಂಗಡಿಗರು ಸುಮ್ಮನಾಗದೆ ಬಹಳ ಶ್ರಮಿಸಿ ವಸಂತ ವಿಹಾರ ಪೊಲೀಸ್ ಸ್ಟೇಷನ್‌ನಲ್ಲಿ ಎಫ್.ಐ.ಆರ್ ನ್ನು ಸಲ್ಲಿಸಿದರು. ಅಪರಾಧ ವಿಭಾಗಕ್ಕೆ ವರ್ಗಾಯಿಸಲಾಯ್ತು ಈ ಪ್ರಕರಣವನ್ನು ಫರ್ಹಾ ತಂದೆ ಇಬ್ಬರು ಚಿಕ್ಕಪ್ಪ,ಚಿಕ್ಕಮ್ಮ ಮತ್ತು ಅಜ್ಜಿಯರನ್ನು ಬಂಧಿಸಿ, ಜಾಮೀನಿನ ಮೇಲೆ ಆಜ್ಜಿ ಮತ್ತು ಚಿಕ್ಕಮ್ಮನನ್ನು ಮಾತ್ರ ಬಿಟ್ಟರು

ಈಗ ಉಳಿದಿರುವುದು ಭಾರತ ಸರ್ಕಾರ ವಿಳಂಬ ಮಾಡದೆ ಶೀಘ್ರ ಕ್ರಮ ಕೈಗೊಂಡಿದ್ದಾರೆ. ಫರ್ಹಾ ಉಳಿಯುತ್ತಿದ್ದಳೆ ಎಂಬುದು ಮಧು ಕಿಶ್ವರ್ ಇದನ್ನು ಕೋಮುಗಳ ದೃಷ್ಟಿಯಿಂದ ನೋಡದೆ, ವಿಶಾಲ ಮನೋಭಾವದಿಂದ ಮಹಿಳಾಹಕ್ಕು ಮಹಿಳೆಯ ಜೀವಜೀವದ ದೃಷ್ಟಿಯಿಂದ ನೋಡಬೇಕು. ಇತರ ದುರಂತಗಳಿಗೆ ಇದೂ ಸೇರ್ಪಡೆಯಾಗಿದೆ. ಜೊತೆಗೆ ವಿಶೇಷ ಅಂತಸ್ತಿರುವ, ವಿದ್ಯಾವಂತ ಸ್ತ್ರೀಯರ ಅಸಹಾಯಕತೆ ಸ್ಥಿತಿಯೆಡೆಗೆ ಬೆರಳು ಮಾಡಿ ತೋರಿಸುತ್ತದೆ. ಮನೆಯವರೇ ಶತ್ರುಗಳಾಗಿ ಅಪರಾಧ ತಂಡಗಳಂತೆ ವರ್ತಿಸಿ ಅಪಹರಣ, ಸೆರೆವಾಸಗಳಿಂದ ಮಾನವನ ಜೀವಿಸುವ ಮೂಲಭೂತ ಹಕ್ಕನ್ನೂ ಕಸಿದುಕೊಳುತ್ತಾರೆ ಎಂದು ಭಾವಿಸುತ್ತಾರೆ.

## ಓದುಗರಲ್ಲಿ ವಿನಂತಿ

ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ ಮಾನಸ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದರೂ, ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾದೆಗ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು.

ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನು ಮೀರಿ ಅಡಿಗಡಿಗೆ ಎದುರಾಗುವ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬ ಗತಿಯಲ್ಲಿ ಪ್ರಕಟವಾಗುತ್ತದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇದರ ಖರ್ಚು ವೆಚ್ಚಗಳೊಂದಿಗೆ ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿ ತಿಂಗಳೂ ಮಾನಸ ಆಫೀಸ್ ಬಾಡಿಗೆಗೆಂದು ರೂ.5·00ರೂ· ಕಳಿಸಲು ಸಾಧ್ಯವೆ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆಯೆನಿಸಿದರೆ, ಅರ್ಧ ವರ್ಷದ ಅಂದರೆ ರೂ.30-00 ಅಥವಾ ಒಂದು ವರ್ಷದ ರೂ.60-00 ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ್ಮ ಬೆಂಬಲ ಮತ್ತು ಪ್ರೋತ್ಸಾಹವಿದೆಯೆಂಬ ಭರವಸೆ ನಮಗಿದೆ. 'ಮಾನಸ' ದೊಡನೆ ನಿಮ್ಮ ಪತ್ರ ವ್ಯವಹಾರದಲ್ಲಿ ಪ್ರತಿಬಾರಿಯೂ ನಿಮ್ಮ ವಿಳಾಸವನ್ನು ಬರೆಯಿರಿ. ಅನವಶ್ಯಕವಾದ ಗೊಂದಲ ಕಡಿಮೆ ಆಗುವುದಲ್ಲದೆ ತಕ್ಷಣ ಪತ್ರಿಸಲು ನಮಗೂ ಸಹಾಯಕವಾಗುತ್ತದೆ. ಜೊತೆಗೆ ವಿಳಾಸದಲ್ಲಿನ ಬದಲಾವಣೆಗಳು ಗಮನಕ್ಕೆ ಬರುತ್ತವೆ.

## ಚಂದಾದಾರರಾಗಿ

ನಿಮ್ಮ ಪ್ರೋತ್ಸಾಹ ಮತ್ತು ಸಹಕಾರಗಳಿಂದಲೇ 'ಮಾನಸ' ವನ್ನು ಪ್ರತಿ ತಿಂಗಳು ಕ್ರಮಬದ್ಧವಾಗಿ ಪ್ರಕಟಿಸಲು ಸಾಧ್ಯ. ನಿಮ್ಮ ಗೆಳೆಯ, ಗೆಳತಿಯರಿಗೆ ಪತ್ರಿಕೆಯನ್ನು ಪರಿಚಯಿಸಿ ಚಂದಾದಾರರನ್ನಾಗಿಸಿ. ಆಜೀವ ಚಂದಾದಾರರಾಗಿ (250 ರೂ) ಪತ್ರಿಕೆಯ ಸ್ವಾವಲಂಬನೆಗೆ ಸಹಾಯಕರಾಗಿ.

## ಗ್ರ್ಯಾಫಿಕ್ಸ್

ನೀವು ಮಾನಸ ಪತ್ರಿಕೆಯ ಮುಖಪುಟ ಹಾಗೂ ಒಳಗಿನ ಪುಟಗಳ ಗ್ರ್ಯಾಫಿಕ್ಸ್ ಗಮನಿಸಬಹುದು. ಪ್ರತಿ ಸಂಚಿಕೆಯಲ್ಲೂ ಹೀಗೆ ಪ್ರತಿ ಲೇಖನಕ್ಕೆ ಹಾಗೂ ಅಂಕಣಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ಪ್ರಕಟಿಸಲಾಗುವುದು. ನೀವು ಕಲಾವಿದರಾಗಿದ್ದರೆ ನಿಮ್ಮ ರಚನೆಗಳನ್ನು 'ಮಾನಸ' ಪ್ರಕಟಣೆಗೆ ಕೊಡಿ.

---

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

ನಂ ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್ : 284 | 8889

# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ :" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು—560067

ಸೂಚನೆ:
ಬಿಡಿಪ್ರತಿ: 2ರೂ.
ವಾರ್ಷಿಕ ಚಂದಾ ;20ರೂ
ಆಜೀವ ಚಂದಾ ; 250ರೂ
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.